# ಜಡಭರತನ



# ಕನಸುಗಳು

ಜಡಭರತ



ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ

ಮನೋಹರ ಗ್ರಂಥಮಾಲೆಯ ೯೭ನೆಯ ಕುಸುಮ.

ಜಡಭರತನ

# ಕನಸುಗಳು

( ದಿವ್ಯಾಗ್ನಿಯನ್ನು ತರಹೊರಟ ಜೀವದ ಆತ್ಮನಿವೇದನ )

ಸಂಪಾದಕ :

ಜಿ. ಬಿ. ಜೋಶಿ

ಅಗಸ್ಟ

೧೯೪೯

ಮನೋಹರ ಗ್ರಂಥಪ್ರಕಾಶನ ಸಮಿತಿ

ಧಾರವಾಡ.

ಸಾಹಿತ್ಯವಿಷಯದಲ್ಲಿ ಸಲಹೆಗಾರರು:

ಶ್ರೀ. ದ. ರಾ. ಬೇಂದ್ರೆ, ಎಂ. ಎ.

ಶ್ರೀ. ವಿ. ಕೃ. ಗೋಕಾಕ, ಬಿ. ಎ., (ಆಕ್ಸಫರ್ಡ)

ಶ್ರೀ. ರಂ. ಶ್ರೀ. ಮುಗಳಿ, ಎಂ. ಎ. ಬಿಟಿ.



ಬೆಲೆ ೧-೮-೦



ಪ್ರಕಾಶಕ:
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ
ಧಾರವಾಡ.

ಮುದ್ರಕ:
ವಿ. ವಾಯ್. ಜಠಾರ
ಕರ್ನಾಟಕ ಪ್ರಿಂಟಿಂಗ್ ವರ್ಕ್ಸ,
ಧಾರವಾಡ.

# ಚಿತ್ರಕ್ಕೆ ಚೌಕಟ್ಟು

ಆಗಸ್ಟ ಹದಿನಾಲ್ಕರ ಸಾಯಂಕಾಲ.

ಕಾರ್ಯಾಲಯದಿಂದ ಜಡಭರತರ ಮನೆಗೆ ಹೊರಟೆ. ಹಸ್ತಪ್ರತಿಯನ್ನು ಬರೆದು ಮುಗಿಸಿರುತ್ತಾರೋ ಇಲ್ಲವೊ ಎಂಬ ಎದೆಗುದಿ ಒಳಗಿತ್ತು; ಮರುದಿನ ಹೂಡಿಕೊಂಡಿದ್ದ ಕಾರ್ಯಕ್ರಮದ ಭಾರವೂ ಮನಸ್ಸಿನ ಮೇಲಿತ್ತು. ಹೇಗಾಗುತ್ತದೋ ಏನಾಗುತ್ತದೋ ಎಂದು ದಿಗಿಲುಗೊಂಡ ಮನವು ಎಲ್ಲೆಲ್ಲಿಯೂ ನಿರಾಸೆಯ ಕತ್ತಲನ್ನೆ ಕಲ್ಪಿಸಿಕೊಂಡು ಅಧೀರವಾಗಿತ್ತು. ಮನಸ್ಸಿನ ಮೈಯನ್ನು ಯಾವುದೇ ಮಾತಿನಿಂದ ಎಲ್ಲಿಯೇ ಮುಟ್ಟಿದರೆ ಸಾಕು, ಇಡೀ ಮನವು ಅದರುತ್ತಿತ್ತು. ಹಾಗಾಗುವುದಕ್ಕೆ ಆ ಕಳೆದ ಹದಿನೈದು ದಿನಗಳಲ್ಲಿ ನಡೆದುಹೋದ ಸಂಗತಿಗಳು ಮನಸ್ಸಿನ ಮೇಲೆ ಮೂಡಿಸಿದ ಭಾವ-ರೇಖೆಗಳೇ ಕಾರಣವೆನ್ನಬಹುದು. ನಿರಾಸೆಗಳು ಒಂದರ ಬೆನ್ನು ಹತ್ತಿ ಒಂದು ಏರೇರಿ ಬಂದು ಜೀವಸತ್ವವನ್ನೆ ಹೀರಿದಂತೆ ಮಾಡಿದ್ದವು. ನಿರೀಕ್ಷಿಸಿದ ಹಸ್ತಪ್ರತಿಯು ಏನೇನೊ ಅನಾನುಕೂಲಗಳೊದಗಿಬಂದು ಹೊತ್ತಿಗೆ ಬಾರದೆ ತಪ್ಪಿಹೋದದ್ದು,—ಆಧಾರ ತಪ್ಪಿದ ಕುರುಡನಂತಾಗಿ ಅತ್ತಿತ್ತ ಸ್ನೇಹಿತ-ಲೇಖಕರು ಕೆಲವರಿಗೆ ಪತ್ರ ಬರೆದು, ತಾರು ಮಾಡಿ, ಒಪ್ಪಿಕೊಂಡಿದ್ದ ಗ್ರಂಥಗಳ ಹಸ್ತಪ್ರತಿಗಳನ್ನು ಇದೇ ಹೊತ್ತಿಗೆ ಕಳುಹಿಸಿಕೊಟ್ಟು ಸಹಾಯ ಮಾಡಲು ಕೇಳಿಕೊಂಡರೂ ಅವರೆಲ್ಲರಿಂದಲೂ ನಿರಾಸೆಯ ಉತ್ತರ ಬಂದದ್ದು,—ಅಗಸ್ಟ ಹದಿನೈದಕ್ಕೆ ಇಷ್ಟು ದಿನ ನಡೆಯಿಸಿಕೊಂಡು ಬಂದ ಉತ್ಸವದ ಒಂದು ಉಪಕ್ರಮ ಈ ವರ್ಷ ಇನ್ನು ತಪ್ಪಿಹೋಗುತ್ತದಲ್ಲಾ ಎಂಬ ಮಿಡುಕಿನಿಂದ ಮುಂದೆ ಬಿದ್ದು ಉತ್ಸವ ಹೂಡಿ, ಕಾರ್ಯಕ್ರಮ ಗೊತ್ತುಮಾಡಿ, ಅತಿಥಿಗಳನ್ನೂ ಆಮಂತ್ರಿಸಿ ಅವರ ಒಪ್ಪಿಗೆ ಪಡೆದು, ಎಲ್ಲ ಸಿದ್ಧತೆಯಾದ ಮೇಲೂ ಪ್ರಕಟನೆಗೆ ಗ್ರಂಥವೇ ಇಲ್ಲದ್ದು,—ಆಗ ಜಡಭರತರನ್ನು ಕಂಡು ಎಲ್ಲಾ ಪರಿಸ್ಥಿತಿ ಹೇಳಿ "ಏನೇ ಮಾಡಿ, ಅಂದಿಗೆ ನಿಮ್ಮ ಒಂದು ಸಂಪೂರ್ಣ ಹಸ್ತಪ್ರತಿಯು ಬಂದರೂ ಸಾಕು, ಅದನ್ನೆ ಪ್ರಕಟಿಸುವ ಶಾಸ್ತ್ರ ಮಾಡುತ್ತೇವೆ. ನೀವು ಒಪ್ಪಿ ನನ್ನನ್ನು ಈ ಸಂಕಟದೊಳಗಿಂದ ಪಾರುಮಾಡಬೇಕು." ಎಂದು ಇದ್ದ ಸ್ನೇಹವನ್ನೆಲ್ಲ ಪಣಕ್ಕೆ ಹಚ್ಚಿ ಕೇಳಿದ್ದು,—ಅದಕ್ಕೆ

"ಆಗಲಿ. ಏನಾದರೂ ಒಂದು ಬರೆದುಕೊಡುತ್ತೇನೆ. ಹೀಗೆ ಚಾಟಿ ತೆಗೆದು ಕೊಂಡು ಬೆನ್ನುಹತ್ತಿದರೆ ಮಣಿಯುವ ಕುದುರೆಯೇನೂ ಅಲ್ಲ ಅದು. ಅದನ್ನು ಬಹಳ ರಂಬಿಸಬೇಕು; ಬಹಳ ಯುಕ್ತಿಯಿಂದ ಕೆಲಸ ತೆಗೆದು ಕೊಳ್ಳಬೇಕು. ನೋಡುತ್ತೇನೆ." ಎಂದು ಅವರು ವಿಶ್ವಾಸ ಹುಟ್ಟಿಸುವ ನಗೆ ನಕ್ಕು ಹೇಳಿದ್ದಕ್ಕೆ "ಹೇಗೂ ಹಿಂದಕ್ಕೊಮ್ಮೆ ನಿಮ್ಮಿಂದ 'ನನ್ನ ಕನಸು ಗಳು' ಎಂಬುದು ಬರುವುದಾಗಿ ಪ್ರಕಟಮಾಡಿಬಿಟ್ಟಿದ್ದೇವೆ ಗ್ರಂಥಮಾಲೆ ಯಲ್ಲಿ; ನಿಮ್ಮ ಆಂತರಿಕ ನಿರ್ಬಂಧದಿಂದ ಈ ವರೆಗೂ ಅದು ಹೊರಕ್ಕೆ ಬಾರದೆ ಹಾಗೇ ಉಳಿದುಬಿಟ್ಟಿದೆ. ಈ ಶತಗ್ರಂಥಪೂರ್ತಿಯಾಗುವುದರೊಳ ಗಾದರೂ ಅದು ಬಂದುಬಿಟ್ಟರೆ ಎರಡೊಂದಾಗುತ್ತದೆ: ಒಂದು, ಈ ಸಮ ಯಕ್ಕೆ ನೀವು ನೆರವಿತ್ತಂತೆಯೂ ಆಗುತ್ತದೆ. ಇನ್ನೊಂದು, ನಮ್ಮ ಗ್ರಾಹಕರಿಗೆ ಕೊಡುತ್ತೇವೆಂದ ಗ್ರಂಥವೊಂದನ್ನು ನಾವು ಸಲ್ಲಿಸಿದ ಸಮಾಧಾನವನ್ನೂ ನಮಗೆ ನೀವು ತಂದುಕೊಟ್ಟಂತಾಗುತ್ತದೆ. ಇಷ್ಟಾಗಿಯೂ ಅದನ್ನೇ ಕೊಡ ಬೇಕೆಂದೇನೂ ಇಲ್ಲ. ಯಾಕಂದರೆ ತುಂಟ ಕುದುರೆಯ ಸಹವಾಸ ಬೇರೆ. ಹಾಗೆ ಹೀಗೆ ಮಾಡಿದರೆ ಎಲ್ಲಿಯಾದರೂ ಹಳ್ಳಕೊಳ್ಳಕ್ಕೆ ಹಾಕಿಬಿಟ್ಟೀತು!" ಎಂದು ನಕ್ಕು ನನ್ನ ಒಳಗಿನ ಅಪೇಕ್ಷೆಯನ್ನೂ ಮಾತಿನಲ್ಲಿ ಹುದುಗಿಸಿ ನುಡಿ ದಿದ್ದಕ್ಕೆ, 'ಆಗಲಿ, ನೋಡೋಣ. ಹದಿನಾಲ್ಕರ ಸಾಯಂಕಾಲ ಬನ್ನಿ. ಈ ಹೊತ್ತು ಐದಲ್ಲವೆ? ಇನ್ನು ಒಂಬತ್ತೇ ದಿವಸ! ಸರಿ." ಎಂದು ಒಂದು ನಿಶ್ಚಯದ ದನಿಯಲ್ಲಿ ಹೇಳಿ, ನಾನು ಮುಂದೆ ಹೆಜ್ಜೆಯಿಡಲು ನನ್ನನ್ನು ಬೆನ್ನು ತಟ್ಟಿ ಹುರಿದುಂಬಿಸಿದ್ದು,—ಎಲ್ಲಾ ಒಂದೊಂದಾಗಿ, ಚಿತ್ರಚಿತ್ರವಾಗಿ, ಮನ ಸ್ಸಿನ ಕಣ್ಣೆದುರಿಗೆ ಹಾಯ್ದು ಹೋದವು. ಅವರ ಕೊನೆಯ ಮಾತು ನನ್ನಲ್ಲಿ ಹುಟ್ಟಿಸಿದ ಧೈರ್ಯವೇ ನನ್ನನ್ನು ಅವರ ಮನೆಯ ಕಡೆಗೆ ಹೋಗುವಂತೆ ಮಾಡಿತ್ತಾದರೂ 'ಇನ್ನೂ ಬರೆದಾಗಿದೆಯೋ ಇಲ್ಲವೋ?' ಎಂಬ ಸಂಶಯ-ಬಳ್ಳಿ ಇನ್ನೂ ಕಾಲಲ್ಲಿ ತೊಡಕಾಡುತ್ತಿತ್ತು.

ಮನಸ್ಸಿನಲ್ಲಿ ಈ ಚಿತ್ರಪ್ರದರ್ಶನ ಇನ್ನೂ ನಡೆದಿರುವಾಗಲೆ ಜಡಭರ-ತರ ಮನೆಯ ಬಾಗಿಲಿಗೆ ಬಂದುಬಿಟ್ಟಿದ್ದೆ. ಬಾಗಿಲು ಮುಂದಕ್ಕೆ ಮಾಡಿತ್ತು. ಮತ್ತೆ ಸಂಶಯ-ಬಳ್ಳಿ ತೊಡಕಿ ಮನಸ್ಸು ಮುಕ್ಕರಿಸಿತು. ಆದರೂ ಸಾವರಿಸಿ ಕೊಂಡು ಮುಂದೆ ಹೋಗಿ ಬಾಗಿಲು ತಟ್ಟಿದೆ.

ಒಳಗಿನಿಂದ ಒಂದು ಎಂಟು-ಹತ್ತು ವರ್ಷದ ಹುಡುಗ ಬಂದು ಬಾಗಿಲು ತೆರೆದ. ತೆರೆದ ಬಾಗಿಲೊಡನೆ ಒಳಗೆ ಬಂದ ಸಾಯಂಪ್ರಕಾಶಕ್ಕೆ ಅಲ್ಲಿಯ ಕತ್ತಲೆಯನ್ನೆಲ್ಲಾ ಸರಿಸಲು ಆಗಲಿಲ್ಲ. ಅಲ್ಲಿಯೆ ಇದ್ದ ಒಂದು ಚಿಮಣಿಯ ಮಿಣುಕು-ಪ್ರಕಾಶದ ಸಹಾಯವನ್ನೂ ಪಡೆಯಬೇಕಾಯಿತದು. ಅಷ್ಟೊಂದು ಪ್ರಬಲವಾಗಿತ್ತು ಅಲ್ಲಿಯ ಕತ್ತಲೆ.

"ಇದ್ದಾರೆಯೋ ಮನೆಯಲ್ಲಿ?" ಎಂದು ಆ ಹುಡುಗನನ್ನು ಕೇಳಿದೆ.

"ಇದ್ದಾರೆ, ಬರ್ರಿ."

"ಎಲ್ಲಿದ್ದಾರೆ?"

"ಒಳಗಿದ್ದಾರೆ."

"ಏನ್ಮಾಡತಾರೆ?"

"ಮಲಗಿದ್ದಾರೆ."

"ನಿದ್ದೆ ಹತ್ತಿದೆಯೇನು?"

"ಇಲ್ಲ. ಕರಕೊಂಡು ಬರಲಿಕ್ಕೆ ಹೇಳಿದ್ದಾರೆ ನಿಮ್ಮನ್ನು. ಬರ್ರಿ ಒಳಗೆ." ಎಂದು ಅದೇ ಚಿಮಣಿಯನ್ನು ಕೈಯಲ್ಲಿ ತೆಗೆದುಕೊಂಡು ಹುಡುಗ ಮುಂದೆ ಮುಂದೆ ನಡೆದ. ನಾನು ಅವನ ಬೆನ್ನುಹತ್ತಿದೆ.

ಪಡಸಾಲಿ, ನಡುಮನೆ, ಹುಸಿ ದಾಟಿದ ಮೇಲೆ ಒಂದು ಕೋಣೆಯಲ್ಲಿ ಕರೆದುಕೊಂಡು ಹೋದ. ಕತ್ತಲುಕತ್ತಲು ಕೋಣೆ, ತಂದ ಚಿಮಣಿಯಿಂದ ಸ್ವಲ್ಪ ಬೆಳಗಿತು. ಆ ಮಂದಪ್ರಕಾಶದಲ್ಲಿ ನೆಲದ ಮೇಲೆ ಹಾಸಿದ ಒಂದು ಹಾಸಿಗೆಯಲ್ಲಿ ಜಡಭರತರು ಮಲಗಿದ್ದನ್ನು ಕಂಡೆ. ನಾನು ಹೋದಾಗ ಕಣ್ಣು ಮುಚ್ಚಿ ಮಲಗಿದ್ದರು. ಅದೇ ಸ್ವಲ್ಪ ಜಂಪು ಹತ್ತಿರಬೇಕೆಂದು ತಿಳಿದುಕೊಂಡೆ. ಎಚ್ಚರಿಸದಿರಲು ಹುಡುಗನಿಗೆ ಸನ್ನೆಮಾಡಿ ಕೆಳಗೆ ಕುಳಿತುಕೊಳ್ಳಬೇಕೆನ್ನುವಷ್ಟರಲ್ಲಿ ಎಚ್ಚತ್ತು ಕಣ್ಣು ತೆರೆದೇಬಿಟ್ಟರು.

"ನಿಮಗೆ ಜಂಪು ಹತ್ತಿತ್ತೇನೋ! ಬಂದು ಕೆಡಿಸಿದೆನಲ್ಲ! ಕ್ಷಮಿಸಿ." ಎಂದು ಅಲ್ಲಿಯೆ ಮಗ್ಗುಲಿಗೆ ಕುಳಿತುಕೊಂಡೆ.

"ಅಯ್ಯೋ! ಯಾವಾಗ ಬಂದಿರೋ ಏನೋ! ಎಷ್ಟೊತ್ತು ನಿಲ್ಲಬೇಕಾಯಿತೋ ಏನೋ! ಕ್ಷಮಿಸಿ. ಏನೋ ಮನೆ ಸಣ್ಣದು. ನಿಮ್ಮಂಥವರಿಗೆ..........ಏs, ರಾಮಾ, ಕಂದೀಲು ಹಚ್ಚಿಕೊಡು ಬಾ. ಹಾಂಗs ಏನಾ

ದರೂ ಒಂದು ತಂದು ಹಾಸು.” ಎಂದು ಮಲಗಿದವರು ಎದ್ದು ಕುಳಿತರು.

“ ಉಹುಂ, ಏಳಬೇಡಿರಿ. ಮಲಗಿಯೇ ಮಾತನಾಡಬಹುದು. ಏನೂ ಸಂಕೋಚವಿಲ್ಲ. ಮನೆ ಸಣ್ಣದಿದ್ದರೂ ಮನ ಸಣ್ಣದಿಲ್ಲ. ಮಲಗಿದ ನಿಮ್ಮನ್ನು ಎಬ್ಬಿಸಿ ತೊಂದರೆ ಕೊಟ್ಟವನು ನಾನು. ನಾನು, ನಿಮಗೆ ಕ್ಷಮಾಪಣೆ ಬೇಡಬೇಕೋ, ಏನು ನೀವು ಬೇಡಬೇಕೋ?....ಏನು! ಇಷ್ಟು ಸೊರಗಿ-ಬಿಟ್ಟಿದ್ದೀರಲ್ಲ! ಪ್ರಕೃತಿ ಸರಿಯಾಗಿಲ್ಲೇನು?” ಎಂದು ಹಸ್ತಪ್ರತಿ ಮುಗಿದಿದೆಯೋ ಇಲ್ಲವೋ ಎಂಬ ಅಳುಕು ಒಳಗಿಟ್ಟುಕೊಂಡೇ ಕೇಳಿದೆ.

ಇದೇ ಹೊತ್ತಿಗೆ ರಾಮು ಬಂದು ಕಂದೀಲಿಟ್ಟು ಜಮಖಾನಿ ಹಾಸಿದ. ಜಡಭರತರು ಅವನಿಗೆ ಮತ್ತೇನೋ ಸಂಜ್ಞೆ ಮಾಡಿದಂತಾಯಿತು. ರಾಮು ಮತ್ತೆ ಒಳಗೆ ಹೊರಟುಹೋದ. ನಾನು ಜಮಖಾನಿಯ ಮೇಲೆ ಕುಳಿತು ಹೆಚ್ಚಾದ ಪ್ರಕಾಶದಲ್ಲಿ ಸುತ್ತಲೂ ಕಣ್ಣು ಓಡಾಡಿಸಿದೆ. ತಲೆಗಿಂಬಿನ ಹತ್ತಿರ ಬರೆದು ಬರೆದು ತುಂಬಿದ ಹಾಳೆಗಳು ಇನ್ನೂ ಅಸ್ತವ್ಯಸ್ತವಾಗಿ ಬಿದ್ದಿದ್ದವು; ಕೆಲ ‘ನೋಟು-ಬುಕ್ಕು’ಗಳು ಕಣ್ಣು ತೆರೆದು ಮಲಗಿದವರಂತೆ ಅಚೆಗೆ ಮೈ ತೆರೆದು ಮಲಗಿದ್ದವು; ಕೆಲವು ಅಲ್ಲಿಯೆ ಗೋಡೆಗೆ ಆತುಕೊಂಡು ಕುಳಿತು ತೂಕಡಿಸುತ್ತಿದ್ದವು; ದೌತಿ, ಟಾಕು ಅದೆಷ್ಟೋ ಹೊತ್ತು ಅವಿಶ್ರಾಂತ ಕೆಲಸ ಮಾಡಿ ಮಾಡಿ ಅಲ್ಲಿಯೆ ಒಂದು ಬದಿಗೆ ಕುಳಿತು ಈಗ ವಿಶ್ರಾಂತಿ ಪಡೆಯುತ್ತಿದ್ದವು. ಒಂದು ಕಾಗದದಲ್ಲಿ ಕಲ್ಲುಸಕ್ಕರೆಯ ಹಳಕುಗಳು ಜಡಭರತರ ಬಾಯಿಗೂ ಬರೆವಣಿಗೆಗೂ ಸವಿ ಕೊಟ್ಟು ಇನ್ನೂ ಸ್ವಲ್ಪ ಉಳಿದಿದ್ದವು.

ಎದ್ದು ಗೋಡೆಗೆ ಒರಗಿಕೊಂಡು ಕುಳಿತ ಜಡಭರತರ ಕಡೆಗೂ ಕಣ್ಣು ಹೊರಳಿಸಿದೆ. ಮೊಟ್ಟಮೊದಲು ಕಂಡಿದ್ದು ಅವರ ಬೆಳೆದ ಬಿಳಿ ಗಡ್ಡ! ಆನಂತರ ಅಸ್ತವ್ಯಸ್ತವಾಗಿ ಎದ್ದು ನಿಂತ ತಲೆಯ ಮೇಲಿನ ಬೆಳ್ಳಿಕೂದಲು. ಅವರ ಮೊಂಡ ಮೂಗು, ಹಲ್ಲಿಲ್ಲದ ಬಾಯಿ, ಇಲಿಯ ಕಿವಿ ಇವೆಲ್ಲ ಒಂದೊಂದಾಗಿ ನಂತರ ನನ್ನ ಲಕ್ಷ್ಯಕ್ಕೆ ಬಂದವು. ಕೋಟು ಪೈರಣು ಹಾಕಿಕೊಂಡೇ ಮಲಗಿರಬೇಕು ಎಂದು ತೋರಿತು. ಆಜಾನುಬಾಹು ಆಳು, ಸಡಿಲುಬಿದ್ದ ಕೋಟಿನಿಂದ ಸೊರಗಿದಂತೆ ಕಂಡಿತು. ಮುಖ ಬೆಳ್ಳಗಾಗಿತ್ತು. ಗಡ್ಡದ ಬಿಳಿಯ ಛಾಯೆ ಅದಕ್ಕೆ ಪೋಷಕವಾಗಿತ್ತು.

“ನಿಮ್ಮ ಪುಸ್ತಕ ಮುಗಿದಿದೆ.” ಎಂದು ನನ್ನ ಅಂತರಂಗದಲ್ಲಿದ್ದ

ಪ್ರಶ್ನೆಗೇ ಮೊದಲು ಉತ್ತರ ಕೊಟ್ಟದ್ದನ್ನು ನೋಡಿ ಹಿಗ್ಗಿದೆ.

"ಅಂ! ಮುಗಿಯಿತು! ಯಾವುದು? ಹೆಸರು?" ಎಂದೆ.

"ಅದೇ."

"ನನ್ನ ಕನಸುಗಳು?"

"ಹುಂ. ಸ್ವಲ್ಪ ಬದಲಾಗಿದೆ; ಹೆಸರಿನಲ್ಲಿ ಅಷ್ಟೆ."

"ಏನೆಂದು?"

"ಜಡಭರತನ ಕನಸುಗಳೆಂದು."

"ಮೊದಲಿನದನ್ನೇ ಇಡಬಹುದಾಗಿತ್ತಲ್ಲ?"

"ಬೇಡ. ಇದೇ ಇರಲಿ ಎನಿಸಿತು."

"ಆಗಬಹುದು. ನಿಮಗೆ ಬಹಳ ಹಿಂಸೆ ಕೊಟ್ಟೆ......."

"ಅದೇನಿಲ್ಲ. ನನಗೇ ನಿಮ್ಮ ಹೊತ್ತಿಗೆ ಮುಗಿಸಿ ಕೊಡುವುದಾಗುತ್ತದೋ ಇಲ್ಲವೋ ಎಂಬ ಅನುಮಾನವಿತ್ತು. ಆದರೆ ಸುದೈವ ಎನಬೇಕು; ಕೊಡುವುದೊಂದೇ ತಡ ಕುದುರೆ ಒಳ್ಳೇ ವೇಗವಾಗಿ ಒಯ್ದು ಮುಟ್ಟಿಸಿತು! ನನ್ನ ಕಲ್ಪನೆಗೂ ಮೀರಿದ್ದು ಇದು."

"ನಿಮ್ಮನ್ನು ನೋಡಿದರೆ ನಿಮಗೆ ಆಯಾಸ ಬಹಳವಾಗಿದೆ ಎನಿಸುತ್ತಿದೆ. ಬಹಳ ಸೊರಗಿದ್ದೀರಿ....ದುರ್ಲಕ್ಷ್ಯ ಮಾಡಬೇಡಿರಿ. ಮತ್ತೇನಾದರೂ ಜಡ್ಡಾಗಿದೆಯೇನು?"

"ಛೇ, ಅದೇನಿಲ್ಲ. ಸ್ವಲ್ಪ ಮಾನಸಿಕಶ್ರಮ ಹೆಚ್ಚಾಗಿರಬೇಕು ಅಷ್ಟೆ. ಉಳಿದದ್ದೇನೂ ಇಲ್ಲ. ಸುಮ್ಮನೆ ವಿಶ್ರಾಂತಿಗಾಗಿ ಬಿದ್ದುಕೊಂಡಿದ್ದೇನೆ. ನಾಳೆಯ ನಿಮ್ಮ ಕಾರ್ಯಕ್ರಮ ಯಾವಾಗ?"

"ಸಾಯಂಕಾಲ ಆರು ಗಂಟೆಗೆ. ಏನೇ ಆದರೂ ನೀವಂತೂ ಬರಲೇಬೇಕಲ್ಲ. ಯಾಕೆ, ಬರಬಹುದೆನಿಸುತ್ತದಲ್ಲ?"

"ನಿಶ್ಚಿತ ಹೇಳಲಾರೆ. ಯಾಕೋ ಅಶಕ್ತತೆ ಬಹಳಾಗಿದೆ. ನನ್ನ ಸಲುವಾಗಿ ಕಾರ್ಯಕ್ರಮ ಮಾತ್ರ ತಡೆದು ನಿಲ್ಲಿಸಬೇಡಿ. ಶಕ್ಯವಿದ್ದರೆ ನಾನು ಬಂದೇ ಬರುತ್ತೇನೆ."

"ಹಾಗೆಂದರೆ ಹೇಗೆ? ನೀವು ಇರಲೇಬೇಕು. ನಿಮಗೇನೂ ಶ್ರಮ ಕೊಡುವುದಿಲ್ಲ. ಕಾರು ಕಳಿಸುತ್ತೇನೆ."

" ಛೆ, ಛೆ, ಅದಾವುದೂ ಬೇಡ. ಶಕ್ಯವಿದ್ದರೆ ನಾನೇ ಬರುತ್ತೇನೆ. ಇಲ್ಲದಿದ್ದರೆ ನೀವು ಕಾರು ಕಳಿಸಿಯೂ ಉಪಯೋಗವಾಗಲಿಕ್ಕಿಲ್ಲ. ಅದನ್ನೇನೂ ನೀವು ಮಾಡಬೇಡಿ."

ರಾಮು ಒಂದು ತಾಟಿನಲ್ಲಿ ಒಂದಿಷ್ಟು ಅವಲಕ್ಕಿ ಬಾಳಿಹಣ್ಣು ಇದೇ ಹೊತ್ತಿಗೆ ತಂದಿಟ್ಟು ಹೋದ.

" ಇದೇಕೆ? ಇದಾವುದೂ ಬೇಡ." ಎಂದೆ.

" ಒಲ್ಲೆನ್ನಬಾರದು; ಸುದಾಮನ ಅವಲಕ್ಕಿ. ತಗೊಳ್ಳಿರಿ. ಹೆಚ್ಚಿನದೇನೂ ಇಲ್ಲ ನಿಮಗೆ ಕೊಡಬೇಕೆಂದರೆ.... ಏನೋ ಇದ್ದದ್ದನ್ನೆ ಸ್ನೇಹದಿಂದ ಸವಿಮಾಡಿಕೊಂಡು ಸ್ವೀಕರಿಸಬೇಕು." ಎನ್ನುವಾಗ ಅವರ ವ್ಯಥೆಗೊಂಡ ಮನಸ್ಸು ಅವರ ಮುಖದ ಮೇಲೆ ಒಡೆದು ಕಾಣುತ್ತಿತ್ತು.

" ಅಲ್ಲಾ ಜಡಭರತರೇ, ನೀವೂ ಹೀಗೆ ನನ್ನನ್ನು ದೂರದಿಂದ ನೋಡಿದರೆ ಹೇಗೆ? ನೀವೇನೂ ಸಂಕೋಚಪಟ್ಟುಕೊಳ್ಳಬೇಡಿ. ನಾನೂ ನೀವೂ ಬೇರೆ ಏನು? ಒಂದೇ. ಅಂದಮೇಲೆ ಏತಕ್ಕಿದೆಲ್ಲ ಉಪಚಾರ?"

" ರಾಮಾ!" ಎಂದು ಕೂಗಿ " ಚಹಾ ಮಾಡು ಅಂತ ಒಳಗ ಹೇಳಪಾ." ಎಂದರು.

ರಾಮು ಬಂದು. " ಸಕ್ಕರಿ ಇಲ್ಲಂತ ಮಾಮಾ." ಎಂದು ಅವರ ಮುಖ ನೋಡಿದ.

ಜಡಭರತರ ಮುಖವೂ ಸಪ್ಪಗಾಯಿತು.

" ನಾನು ಬರುವಾಗ ಚಹಾ ಕುಡಿದೇ ಬಂದಿದ್ದೇನೆ. ದಯಮಾಡಿ ಶ್ರಮ ತೆಗೆದುಕೊಳ್ಳಬೇಡ್ರಿ." ಎಂದು ಹೇಳಿ ಅವಲಕ್ಕಿಗೆ ಕೈ ಹಾಕಿದೆ. ಜಡಭರತರ ಅಸಮಾಧಾನ ಇನ್ನೂ ಕಡಿಮೆಯಾಗಿರಲಿಲ್ಲ. ನಾನೇ ಆ ವಿಷಯವನ್ನೆ ಮರೆಯಿಸಬೇಕೆಂದು " ನೋಡೋಣ ಎಲ್ಲಿದೆ ಹಸ್ತಪ್ರತಿ?" ಎಂದು ಕೇಳಿದೆ.

ತಲೆಗಿಂಬಿಗೆ ಮುಚ್ಚಿ ಬಿದ್ದ ಒಂದು 'ನೋಟು-ಬುಕ್ಕು' ತೋರಿಸಿ " ಅಲ್ಲಿದೆ. ತೆಗೆದುಕೊಳ್ಳಿ." ಎಂದರು.

ಬಾಯಲ್ಲಿ ಮುಕ್ಕು ಹಾಕುತ್ತ ಬಾಗಿ ಅದನ್ನು ಕೈಯಲ್ಲಿ ತೆಗೆದುಕೊಂಡೆ. ಹಾಂಗೆ ಪುಟಗಳನ್ನು ಒಮ್ಮೆ ತಿರಿವಿಹಾಕಿದೆ. ಅಲ್ಲಿ ಇಲ್ಲಿ ಕಣ್ಣು ಓಡಾಡಿಸಿ

ಮತ್ತೆ ಮೊದಲಿನ ಪುಟಕ್ಕೆ ಬಂದೆ. ಅಷ್ಟರೊಳಗೆ ಯಾವುದೋ ಒಂದು ಜಾಗಕ್ಕೆ ವಿದ್ಯುದ್ದೀಪದ ಗುಂಡಿ ಮುಟ್ಟಿದಂತಾಗಿ ಒಮ್ಮೆಲೆ ಮನಸ್ಸನ್ನು ಎಳೆದು ಬಿಟ್ಟಿತು. ಮೊದಮೊದಲು ತಿನ್ನುವದು ಓದುವದು ಕೂಡಿಯೆ ನಡೆಯಿತು. ಮುಂದೆ ಮುಂದೆ ತಿನ್ನುವದುಳಿದು ಓದುವದೊಂದೇ ನಡೆಯಿತು. ಅಲ್ಲಿಂದ ಓದುವದೆನ್ನುವದೂ ಒಂದು ಬೇರೆಯಾಗಿ ಉಳಿಯುದೆ ಅದರಲ್ಲಿಯ ಅನುಭವದ ಲ್ಲಿಯೆ ಒಂದಾಗಿಬಿಟ್ಟಿತು ಜೀವ. ಮನೆ ಮರೆಯಾಯಿತು. ಮೂಲೆಯಲ್ಲಿದ್ದ ಜಡಭರತರೂ ಕಣ್ಮರೆಯಾದರು. ಹೊತ್ತಿನ ಗೊತ್ತೂ ಉಳಿಯಲಿಲ್ಲ. ಅರ್ಧ ಸುಲಿದ ಬಾಳೆಹಣ್ಣು ಹಾಗೇ ತಾಟಿನಲ್ಲಿತ್ತು; ತುತ್ತಿಗಾಗಿ ಅವಲಕ್ಕಿಯಲ್ಲಿಟ್ಟ ಕೈ ಅಲ್ಲಿಯೆ ಉಳಿದಿತ್ತು; ಎಡಗೈ ಪುಟಗಳನ್ನು ತಿರುವಿ ಹಾಕುತ್ತಿತ್ತು. ಒಂದೇ ಒಂದು ಕನಸು ಕಣ್ಣೆದುರಿಗೆ ದೃಶ್ಯಾದೃಶ್ಯವಾಗಿ ಹಾಯ್ದು ಹೋಗುತ್ತಿರುವಂತೆ ತೋರಿತು. ದಿಗ್ವಿಜಯಕ್ಕೆ ಹೊರಟ ರಾಜನು ತಿರುಗಿ ಬಂದು ಆಲದಮರದ ಬೊಡ್ಡೆಗೆ ಕುಳಿತು ದರ್ಶನಕ್ಕಾಗಿ ತನ್ನನ್ನೆ ಮಾರುಕೊಟ್ಟ ಕೊನೆಯ ದೃಶ್ಯ ಇನ್ನೂ ಕಣ್ಣೆದುರಿಗೆ ಕಟ್ಟಿ ನಿಂತಿತ್ತು. ಅದನ್ನೇ ನೆನೆದು ಒಂದೇ ಸವನೆ ಜೀವ ತಳಮಳಿಸುತ್ತಿತ್ತು. 'ಇದೆಲ್ಲ ಕನಸೇ ಆಗಲಿ ದೇವ!' ಎಂದು ಜೀವ ಗಾಬರಿಗೊಂಡು ತಡವರಿಸಿತು.

'ನೋಟು-ಬುಕ್ಕು' ಮುಚ್ಚಿ ಕೆಳಗಿಟ್ಟು ನೋಡಿದೆ. ರಾತ್ರಿ ಬಹಳಾ ಗಿತ್ತು. ಜಡಭರತರು ಹಾಸಿಗೆಯ ಮೇಲೆ ಅಡ್ಡಾಗಿದ್ದರು.

ರಾಮು ಅದೇ ಹೊತ್ತಿಗೆ ಒಳಗಿನಿಂದ ಬಂದು ಚಹಾ ತಂದಿಟ್ಟ.

"ಅಂತೂ ಚಹಾ ಮಾಡಿಸಿಯೆಬಿಟ್ಟಿರಲ್ಲ; ಬಿಡಲಿಲ್ಲ!" ಎಂದೆ.

"ಸಕ್ಕರೆ ಸಿಕ್ಕಿತಂತೆ. ಮಾಡಿದ್ದಾರೆ. ತಕ್ಕೊಳ್ಳಿ."

"ಈಗ ಉಂಡ ಸಕ್ಕರೆಯ ಸವಿ ನನ್ನನ್ನು ತಣಿಸಿಬಿಟ್ಟಿದೆ!" ಎಂದು ಕಪ್ಪು ಕೈಯಲ್ಲಿ ತೆಗೆದುಕೊಂಡು ಬಾಯಿಗೆ ಹಚ್ಚಿದೆ.

ಜಡಭರತರೂ ಎದ್ದು ಕುಳಿತು ಕಪ್ಪು ತೆಗೆದುಕೊಂಡು ನನ್ನ ಕಡೆಗೆ ನೋಡಿ "ಓದುವದು ಮುಗಿಯಿತೇ?" ಎಂದು ಕೇಳಿದರು.

"ಮುಗಿಯಿತು. ಆದರೆ ನೀವು ನನ್ನನ್ನು ಕ್ಷಮಿಸಬೇಕು .... ನಿಮ್ಮ ಕಡೆಗೆ ಲಕ್ಷ್ಯವಿಡದೆ ಲೌಕಿಕವನ್ನೂ ಮೀರಿ ನಾನು ಓದುತ್ತ ಕುಳಿತುಬಿಟ್ಟೆ!"

"ಅದಾವುದನ್ನೂ ಮನಸ್ಸಿನಲ್ಲಿ ತರಬೇಡಿ. ಇಬ್ಬರೂ ಒಂದೇ ಎಂದಿ

ದ್ದೀರಲ್ಲ! ಹಾಗೆಲ್ಲ ಹೆಚ್ಚುಕಡಿಮೆ ತಿಳಿದುಕೊಂಡರೆ ಹೇಗೆ? ಪುಸ್ತಕ ನಿಮಗೆ ಒಪ್ಪಿಗೆಯಾಯಿತೇ? ”

“ ಅಂದರೆ? ”

“ ಪ್ರಕಾಶನಕ್ಕೆ. ”

“ ಏನು ಮಾತಿದು....... ” ಎನ್ನುವಾಗ ನನ್ನ ಮನಸ್ಸು ಒಂದು ಬೇರೆ ಚಿತ್ರವನ್ನೆ ಕಾಣುತ್ತಿತ್ತು ; ಈ ಮೊಸಳೆಯ ಮೈಯಂತಹ ಗುಡ್ಡದೊಳಗಿಂದ ಎಂತಹ ಅಮೃತಪ್ರವಾಹ ಹರಿಯುತ್ತಿದೆಯಲ್ಲಾ ಎಂದು ಆ ಆಕೃತಿಯನ್ನು ನೋಡಿ ಅದು ವಿಸ್ಮಯಗೊಂಡು ಮೂಕವಾಗಿತ್ತು.

“ ಮಾತು ಅಷ್ಟಕ್ಕೇ ನಿಲ್ಲಿಸಿದಿರಲ್ಲ? ಮನಸ್ಸು ಬೇರೆ ಕಡೆಗೆ ಎಲ್ಲಿಯಾದರೂ ಹೋಗಿದೆಯೇನು? ಅಥವಾ ಬಹಳ ಹೊತ್ತಾಯಿತೇ? ”

“ ಹೊತ್ತಿನಕಿಂತಲೂ ಆ ಮನಸ್ಸಿಗೆ ನಿಮ್ಮ ಕನಸುಗಳೊಳಗಿಂದ ಬಿಡಿಸಿಕೊಂಡೇ ಬರುವುದು ಇನ್ನೂ ಆಗಲೊಲ್ಲದಾಗಿದೆ. ” ಎಂದು ಚಹಾ ಕುಡಿದು ಕಪ್ಪನ್ನು ಆಚೆಗಿಟ್ಟು “ ಏನೇನೋ ಕೇಳಬೇಕೆಂಬ ಆತುರ ಹುಟ್ಟಿದೆ. ಕೇಳಿದರೆ ಹೇಳುವಿರಾ? ” ಎಂದೆ.

“ ಅವಶ್ಯವಾಗಿ. ಗೊತ್ತಿದ್ದದ್ದನ್ನು ಹೇಳುತ್ತೇನೆ. ಇಲ್ಲದ್ದನ್ನು ಇಲ್ಲ ಎನ್ನುತ್ತೇನೆ. ನಿಮಗೆ ಅಡಿಕೆ ಬೇಕೇನೋ? ”

“ ಬೇಡ. ಬೇಡ. ” ಎನ್ನುತ್ತಿರುವಾಗಲೂ ಕೇಳದೆ ಮತ್ತೆ ರಾಮುನನ್ನು ಕರೆದು ತರಹೇಳಿದರು. ರಾಮು ಹೋಗಿ ತಂದುಕೊಟ್ಟ. ತಂದ ಅಡಕಿಯ ಹೋಳನ್ನು ಬಾಯಲ್ಲಿ ಹಾಕಿಕೊಂಡು ಪ್ರಶ್ನೆಗಳನ್ನು ತಯಾರಿಸಿಕೊಳ್ಳಹತ್ತಿದೆ. ಜಡಭರತರಿಗೆ ಮಲಗಿಕೊಂಡೇ ಉತ್ತರ ಹೇಳಬಹುದೆಂದು ತಿಳಿಸಿದೆ. ಅವರೂ ಒಪ್ಪಿಕೊಂಡರು.

ಅಲ್ಲಿಂದ ಪ್ರಾರಂಭವಾಯಿತು ಪ್ರಶ್ನೋತ್ತರ:

“ ಇದರಲ್ಲಿ ನೀವು ಉಪಯೋಗಿಸಿದ ಕನಸುಗಳೆಲ್ಲ ನಿಜವಾಗಿ ನಿಮಗೆ ಬಿದ್ದ ಕನುಸುಗಳೇ ಏನು? ”

“ ಹೌದು. ಕಂಡ ದಿನಾಂಕುಗಳನ್ನೂ ಅಲ್ಲಲ್ಲಿ ಕಾಣಿಸಿದ್ದೇನೆ. ”

“ ಕನಸುಗಳನ್ನು ದಿನಾಂಕಕ್ರಮದಲ್ಲಿಯೇ ಜೋಡಿಸಿದ್ದೀರಾ? ”

“ ಇಲ್ಲ. ಕಥೆಯ ಚೌಕಟ್ಟಿಗೆ ಹೊಂದಿಕೆಯಾಗುವಂತೆ ಜೋಡಿಸಿದ್ದೇನೆ.”

" ಬೇರೆ ಬೇರೆ ದಿನಗಳಲ್ಲಿ ಕಂಡ ಕನಸುಗಳು ಒಂದೇ ಕತೆಯ ಚೌಕಟ್ಟಿನಲ್ಲಿ—ಇದ್ದಕಿದ್ದಂತೆ ಬರೆದಲ್ಲಿ—ಪೂರಕಗಳಾಗಿ ಹೊಂದಿದ್ದು ಹೇಗೆ? "

" ಅಂದರೆ ಕತೆಗೆ ಹೊಂದಿಕೆಯಾಗುವುದಕ್ಕಾಗಿ ಕನಸುಗಳನ್ನು ನಾನು ಕಲ್ಪಕತೆಯಿಂದ ಹೆಚ್ಚುಕಡಿಮೆ ಮಾಡಿಕೊಂಡಿರಬೇಕು ಎಂಬುದೇ ನಿಮ್ಮ ಪ್ರಶ್ನೆಯ ಒಳ ಆಶಯ ಅಲ್ಲವೇ ? "

" ಹೌದು, ಹೌದು. "

" ಹರಿದ ಪುಸ್ತಕದ ಪುಟಗಳನ್ನು ಎಲ್ಲಿಯೇ ಯಾವಾಗ ಸಿಕ್ಕರೂ ಆ ಪುಸ್ತಕದ ಕ್ರಮದಲ್ಲಿ ಜೋಡಿಸಲಿಕ್ಕೆ ಬರುವುದಿಲ್ಲವೇ ? ಹಾಗೇ 'ದೈವ ಸಂಕಲ್ಪ-ಪುಸ್ತಕದ' ಹರಿದ ಪುಟಗಳು ಇಲ್ಲಿ ಕೂಡಿದ್ದರೂ ಕೂಡಿರಬಹುದು ! "

" ಶಕ್ಯವಿದೆ. ಇದರಲ್ಲಿ ನಿಮ್ಮ ಎಲ್ಲಾ ಕನಸುಗಳನ್ನೂ ಉಪಯೋಗಿಸಿದ್ದೀರಾ ? "

" ಇಲ್ಲ. ಸುಮಾರು ಇಪ್ಪತ್ತು ಮಾತ್ರ. "

" ನಿಮಗೆ ಬಿದ್ದ ಎಲ್ಲ ಕನಸುಗಳನ್ನೂ ಬರೆದಿಟ್ಟಿದ್ದೀರಾ ? "

" ಬಹುಭಾಗ ಬರೆದಿಟ್ಟಿದ್ದೇನೆ ದಿನಚರಿಯಲ್ಲಿ. "

" ಹಾಗಾದರೆ ದಿನಚರಿ ತಪ್ಪದೆ ಬರೆಯುತ್ತೀರಾ ? "

" ಕೆಲವೊಂದು ಕಾಲ ಬರೆದಿಡುತ್ತೇನೆ. "

" ಇಲ್ಲಿಯ ವರೆಗೆ ಒಟ್ಟು ಎಷ್ಟು ಕನಸುಗಳನ್ನು ಕಂಡಿದ್ದೀರಿ? "

" ಕಂಡಿದ್ದು ಬಹಳ. ಬರೆದಿಟ್ಟದ್ದು ಸುಮಾರು ನೂರಿರಬಹುದು. "

" ಕನಸುಗಳು ಜೀವನಕ್ಕೇನಾದರೂ ಉಪಯೋಗವಾಗುತ್ತವೆಂದು ನಿಮಗೆ ನಿಸುತ್ತದೆಯೇ ? "

" ಎನಿಸುತ್ತದೆ. "

" ಹೇಗೆ ? "

" ಮನಸ್ಸಿನ ಒಳ್ಳೆಯ ಸಂಸ್ಕಾರ ಬೆಳೆಯಿಸುವುದರಲ್ಲಿ, ಇರುವಿಕೆಗೆ ಬರುವಿಕೆಯ ರೂಪ ಕೊಡುವುದರಲ್ಲಿ ಕನಸುಗಳು ಸಹಾಯಕವಾಗುತ್ತವೆ. "

" ಮುಂದಾಗುವುದನ್ನು ಕನಸುಗಳು ಹೇಳುತ್ತವಂತೆ, ನಿಜವೇ ? "

" ಎಲ್ಲಾ ಕನಸುಗಳೂ ಹೇಳುತ್ತವೆಂದಲ್ಲ. ಕೆಲವು ಹೇಳುತ್ತವೆ. "

" ನಿಮಗೆ ಆ ಅನುಭವ ಉಂಟೇ ? "

" ಉಂಟು. "

" ಹೇಳಬಹುದೇ ? "

" ನನ್ನ ಕನಸಿನಲ್ಲಿ ಕರಿ ಚಿರ್ಜ ವೈಮೇಲೆ ಬಂದಾಗಲೆಲ್ಲ ಅನಾರೋಗ್ಯ ಸೂಚಕವಾಗಿದೆ. "

" ನಿಮ್ಮ ಕನಸುಗಳನ್ನು ನೀವು ಹೇಗೆ ನೆನಪಿಟ್ಟುಕೊಂಡು ಎಚ್ಚರದಲ್ಲಿ ಅವನ್ನು ಬರೆದು ತೆಗೆಯುತ್ತೀರಿ ? "

" ಚಿತ್ರಕಾರ ಚಿತ್ರ ಬರೆವಂತೆ. "

" ನೀವು ಈ ಕನಸುಗಳಲ್ಲಿ ಉಪಯೋಗಿಸಿದ 'ನಾನು' ಎಂಬದಕ್ಕೆ ಏನಾದರೂ ವಿಶೇಷಾರ್ಥವಿದೆಯೇ ? "

" ಏನೂ ಇಲ್ಲ. ಕತೆ ಹೇಳುವವಕ್ಕೆ ಅನುಕೂಲವೆಂದು ಅದನ್ನು ಬಳಸಿದ್ದೇನೆಯೆ ಹೊರತು ವಿಶೇಷಾರ್ಥವೇನೂ ಇಲ್ಲ. ಓದುವವರೂ 'ನಾನು' ಆಗಿ ಓದುವುದರಿಂದ ರಸಾನುಭವಕ್ಕೆ ಅನುಕೂಲವುಂಟಾದೀತೆಂದು ನನ್ನ ಭಾವನೆ. ಪ್ರತ್ಯಕ್ಷಾನುಭವ ತಂದುಕೊಡುವುದಕ್ಕಾಗಿ ಹುಟ್ಟಿದ 'ಫೊರ್ಥ್ ಡೈಮೆನ್ಶೈನ್'ದ ಸಿನೇಮಾ ಇದ್ದಂತೆ. ಮೋಟರಿನ ಒಂದು ಅಪಘಾತ ತೋರಿಸುವಾಗ ಇಡಿ ಪ್ರೇಕ್ಷಕಸಮೂಹವೆಲ್ಲ ಮೋಟರಿನಲ್ಲಿಯೆ ಕುಳಿತು ಅಪಘಾತಕ್ಕೀಡಾದಂತೆ ಪ್ರತ್ಯಕ್ಷಾನುಭವ ಬಂದಂತಾದದ್ದನ್ನು ನೋಡಿರ ಬಹುದಲ್ಲ? ಈ 'ನಾನು' ಎಂಬುದು ಅಂತಹ ಸಿನೇಮಾಕ್ಕೆ ಹೋಗುವಾಗ ಕಣ್ಣಿಗೆ ಉಪಯೋಗಿಸುವ ಬಣ್ಣದ ಕಾಜು ಇದ್ದಂತೆ, ಪ್ರತ್ಯಕ್ಷಾನುಭವದ ಅನುಭವ ತಂದುಕೊಡುತ್ತದೆ. ಇದೇ ಅದರ ಅನುಕೂಲತೆಯೆಂದು ತಿಳಿದು ಕೊಳ್ಳಬಹುದು. "

" ಹೌದು. ನೀವು ಹೇಳುವದು ನಿಜ. ಇನ್ನೊಂದು ಪ್ರಶ್ನೆ. ಇದರ ಲ್ಲಿಯು ರಾಜ ದಿವ್ಯಾಗ್ನಿ ಪಡೆದು ಬಂದರೂ ಏನೂ ಉಪಯೋಗವಾಗಲಿಲ್ಲವಲ್ಲ? ಜನ ಆವನನ್ನು ಗುರುತಿಸಲಿಲ್ಲ ಕೂಡ! ಹೀಗೇಕೆ ? "

" ಆ ರಾಜ ದಿವ್ಯಾಗ್ನಿಯನ್ನು ತಾನು ಪಡೆದಿದ್ದರೂ ಇನ್ನೊಬ್ಬರಿಗೆ ತೋರಿಸುವ ಶಕ್ತಿ ಪಡೆದಿರಲಿಲ್ಲ ಇಷ್ಟೆ. "

ಹೊತ್ತೆಷ್ಟಾಯಿತೆಂದು ಕೈಗಡಿಯಾರದ ಕಡೆಗೆ ನೋಡಿದೆ. ಹನ್ನೆರಡರ ಸಮೀಪಕ್ಕೆ ಬಂದಿತ್ತು. ಮತ್ತೊಮ್ಮೆ ಅವರ ಕ್ಷಮಾಪಣೆ ಬೇಡಿ, ಮರುದಿನ

ಕಾರ್ಯಕ್ರಮಕ್ಕೆ ಬರಲು ಬೇಡಿಕೊಂಡು, ಹಸ್ತಪ್ರತಿಯನ್ನು ಕೈಯಲ್ಲಿ ತೆಗೆದುಕೊಂಡು ಹೊರಡುವದಕ್ಕಾಗಿ ಎದ್ದು ನಿಂತೆ. ಅಷ್ಟೊತ್ತಿಗೆ ಇನ್ನೊಂದು ಮಾತು ನೆನಪಾಯಿತು. ಕೇಳಿಯೇಬಿಡಬೇಕೆಂದು ಮತ್ತೆ ಕುಳಿತೆ.

"ಇದಕ್ಕೆ ಒಬ್ಬ ಹಿರಿಯ ಸಾಹಿತಿಗಳಿಂದ ಮುನ್ನುಡಿ ಬರೆಯಿಸಿದರೆ ಹೇಗೆ?" ಎಂದು ಕೇಳಿದೆ.

"ಬರೆಯಿಸುವುದಿದ್ದರೆ ಶ್ರೀ. ಬೇಂದ್ರೆಯವರ ಕೈಯಿಂದ ಬರೆಯಿಸಿ." ಎಂದು ಹೇಳಿ ಆಕಳಿಸಿದರು. ನಿದ್ದೆ ಕಣ್ಣಲ್ಲಿಯೆ ಬಂದು ಕುಳಿತಿತ್ತು. ನಾನೂ ನಿರುಪಾಯನಾಗಿ ನನ್ನ ಮೇಲಿದ್ದ ಭಾರದ ಹೊರೆಯಿಂದ ಅವರ ಮೇಲೆ ಇಷ್ಟು ಒರಗಬೇಕಾಗಿತ್ತು. ಮನಸ್ಸಿಗೆ 'ಇಷ್ಟು ಹಿಂಸೆ ಕೊಡು ತ್ತಿದ್ದೇನಲ್ಲಾ ಇವರಿಗೆ' ಎಂದು ಅಸವಸಿಯಾಗುತ್ತಿದ್ದರೂ ಬಿಡುವಂತಿರಲಿಲ್ಲ. ಮತ್ತೆ "ನಿಮ್ಮ ಮಾತು ಆನಂತರ ಬರೆಯುತ್ತೀರಾ?" ಎಂದು ಕೇಳಿದೆ. ಅವರು "ಈಗ ನೀವು ಕೇಳಿದ್ದು, ಇಲ್ಲಿ ನಡೆದದ್ದು ಎಲ್ಲಾ ನೀವೇ ಬರೆದು ಬಿಡ್ರಿ ಆಯ್ತು. ಅದೇ ಮೊದಲ ಮಾತಾಗುತ್ತದೆ." ಎಂದು ಆದ ಆಯಾಸ ವನ್ನೆಲ್ಲ ನಗೆಯಲ್ಲಿ ಮರೆಯಾಗಿಸಿ ಹೇಳಿದರು. "ವಿಶ್ರಾಂತಿ ಅವಶ್ಯವಿದೆ ನಿಮಗೆ. ಹೆಚ್ಚಿನ ಶ್ರಮ ಇನ್ನು ಮೇಲೆ ತೆಗೆದುಕೊಳ್ಳಬೇಡ್ರಿ." ಎಂದು ಹೇಳುವಾಗ ಅವರ ಅವಿಶ್ರಾಂತಿಗೆ ನಾನೇ ಕಾರಣನಾಗಿದ್ದನ್ನು ನೆನೆದು ಗಲ್ಲ ಗಲ್ಲ ಹೊಡೆದುಕೊಳ್ಳುವಂತಾಯಿತು. ಜಡಭರತರು ರಾಮುನನ್ನು ಕೂಗಿ ನನ್ನನ್ನು ಕಳಿಸಿಬರಲು ಹೇಳಿದರು. ರಾಮು ಬಂದು ಕಂದೀಲು ತೆಗೆದುಕೊಂಡು ನನ್ನನ್ನು ತಲೆಬಾಗಿಲ ಹೊರಕ್ಕೆ ಕಳುಹಿಸಿ ಬಾಗಿಲು ಮುಚ್ಚಿಕೊಂಡ.

ಹಾಲು ಚೆಲ್ಲಿದಂತಹ ಬೆಳದಿಂಗಳಿನಲ್ಲಿ ನಡೆದದ್ದನ್ನೆಲ್ಲ ನೆನೆಸುತ್ತ ಮನೆಗೆ ಬಂದು ಮುಟ್ಟಿದೆ.

* * * * *

ಅಗಸ್ಟ ಹದಿನೈದರ ಸಾಯಂಕಾಲ.

ಗ್ರಂಥಮಾಲೆಯ ಹುಟ್ಟುಹಬ್ಬ.

ಸಭಾಮಂಟಪ ತುಂಬಿತ್ತು. ಕಾರ್ಯಕ್ರಮಗಳೆಲ್ಲ ಒಳ್ಳೆಯ ರೀತಿ ಯಿಂದ ಅಚ್ಚೊತ್ತಿದಂತೆ ಜನರ ಮನಸ್ಸಿನಲ್ಲಿ ಮೂಡಿದ್ದವು. 'ಹೌದು! ವಹವ್ವಾ! ಬೇಷ್! ಗ್ರ್ಯಾಂಡ!' ಎಂದು ನೆರೆದ ಜನ ಮಾತನಾಡಿ

ಕೊಳ್ಳುತ್ತಿತ್ತು. ಒಬ್ಬರಿಗೆ ಭಾವಗೀತದ ಆ ಶ್ಲೋಕವು ಮನಸ್ಸಿಗೆ ಸೇರಿದ್ದರೆ ಇನ್ನೊಬ್ಬರಿಗೆ ಕೊನೆಯ ಆ 'ವಂದೇ ಮಾತರಂ' ಹೆಚ್ಚು ಹಿಡಿದಿತ್ತು. ಒಬ್ಬರನ್ನು ಜಲತರಂಗ ತಲೆದೂಗಿಸಿದ್ದರೆ ಇನ್ನೊಬ್ಬರನ್ನು 'ನನ್ನ ಹರಣ'ದ ಭಾವಗೀತಕ್ಕೆ ನಾಟ್ಯರೂಪ ಜೋಡಿಸಿದ ಆ ಮೋಹಿನಿಯ ನೃತ್ಯ ಮೈಮರೆಯಿಸಿತ್ತು. ಒಬ್ಬರು ಕುಮಾರವ್ಯಾಸನ ಆ ವೀರವಾಣಿಯಿಂದ ರೋಮ-ಹರ್ಷ ಪಡೆದಿದ್ದರೆ ಇನ್ನೊಬ್ಬರು ಹಾಸ್ಯದ ಬುಗ್ಗೆಯಾಗಿದ್ದ ಒಬ್ಬ ಅಭಿನಯ ಚತುರನ ಮಾತುಗಳಿಂದ ಹೃದಯಹರ್ಷ ಪಡೆದಿದ್ದರು. ಒಬ್ಬರಿಂದ ಅಂದಿನ ಮಾತುಗಾರಿಕೆ ಮೆಚ್ಚಿಕೆ ಪಡೆದಿದ್ದರೆ ಇನ್ನೊಬ್ಬರಿಂದ ಅಂದಿನ ಅಪಸ್ವರದ ಹಾಡುಗಾರಿಕೆ ಹೌದೆನಿಸಿಕೊಂಡಿತ್ತು.

ಕಾರ್ಯಕ್ರಮಗಳು ನಡೆದಿರುವಾಗಲೆ ಜಡಭರತರ ಮನೆಗೆ ಕಾರು ಕಳಿಸಿದ್ದೆ. 'ನಾನು ಬರುವುದಕ್ಕೆ ಪ್ರಕೃತಿ ಅನುಕೂಲವಾಗಿಲ್ಲ.' ಎಂಬ ಸುದ್ದಿಯೊಡನೆ, ಹೋದ ಕಾರು ಮರಳಿ ಬಂತು.

ಹಸ್ತಪ್ರತಿಯ ಪ್ರಕಟನೆ ಜಡಭರತರಿಲ್ಲದೆ ನಡೆಯಬೇಕಾಯಿತು.

ಅಂದಿನ ಅತಿಥಿಗಳು ನಾಲ್ಕು ಒಳ್ಳೆಯ ಮಾತುಗಳನ್ನು ಜಡಭರತರ ಬಗ್ಗೆ ಹೇಳಿ ಆ ಕಾರ್ಯ ನೆರವೇರಿಸಿದರು.

ಕಾರ್ಯಕ್ರಮ ಮುಗಿಯಿತು.

ಒಂದೆರಡು ದಿನ ಬಿಟ್ಟು ಹಸ್ತಪ್ರತಿಯನ್ನು ಮುದ್ರಣಕ್ಕೆ ಕೊಟ್ಟೆ. ಹದಿನೈದು ದಿನಗಳಲ್ಲಿಯೆ ಎಲ್ಲ ಮುದ್ರಣ ಮುಗಿಯಿತು.

ಈ ನಡುವೆ ಜಡಭರತರ ಮನೆಗೆ ಎರಡು ಮೂರು ಸಲ ಹೋಗಿ ಬಂದೆ. ನಾನು ಹೋದಾಗಲೆಲ್ಲ ನಿದ್ದೆ ಹತ್ತಿ ಮಲಗಿರುತ್ತಿದ್ದುದರಿಂದ ಅವರನ್ನು ಎಬ್ಬಿಸಲಾರದೆ ಹಾಗೇ ತಿರುಗಿ ಬಂದುಬಿಟ್ಟೆ.

ಮುದ್ರಣ ಮುಗಿಯಿತು. ಮುನ್ನುಡಿಗಾಗಿ ಶ್ರೀ. ಬೇಂದ್ರೆಯವರ ಹತ್ತಿರ ಹೋಗಿ ಬರೆಯಿಸಿಕೊಂಡೂ ಬಂದೆ. ಜಡಭರತರಿಂದ ಏನಾದರೂ ಬರೆಯಿಸಬೇಕೆಂದರೆ ಅವರ ಅಸ್ವಸ್ಥ ಪ್ರಕೃತಿಯ ಮೂಲಕ ಸಾಧ್ಯವಾಗಲಿಲ್ಲ. ಅಂದು ರಾತ್ರಿ ಅವರೊಡನೆ ನಡೆದ ಮಾತುಕತೆಯನ್ನೆಲ್ಲ ನಾನೇ ಬರೆದು ಮುದ್ರಿಸಿಬಿಟ್ಟೆ.

ಮುದ್ರಿತ ಪುಸ್ತಕ, ಅವರಿಗೆ ಸಲ್ಲಬೇಕಾದ ಗೌರವಧನ, ಒಂದಿಷ್ಟು

ಹಣ್ಣು ತೆಗೆದುಕೊಂಡು ಜಡಭರತರ ಮನೆಗೆ ಹೊರಟೆ. ಮುದ್ರಿತವಾಗಿದ್ದ ತಮ್ಮ ಪುಸ್ತಕ ನೋಡಿ ಎಷ್ಟು ಸಂತೋಷಪಡುವರೋ ಎಂದು ಹಿರಿಹಿರಿ ಹಿಗ್ಗಿದ್ದೆ. ಮೊದಲ ಸಲ ಅವರ ಮನೆಗೆ ಹೊರಟಾಗಿನ ಮನಶ್ಚಿತ್ರ ಕಣ್ಣೆದುರಿಗೆ ಬಂತು. ಆಗ ಎಲ್ಲಾ ಒಳ್ಳೆಯದರಲ್ಲೆ ಮುಗಿದಿತ್ತು.

ಮನೆಯ ಮೆಟ್ಟಲಿಗೆ ಹೋದಾಗ ಅಂದಿನಂತೆ ಇಂದೂ ಬಾಗಿಲು ಮುಂದಕ್ಕೆ ಮಾಡಿತ್ತು. ಹತ್ತಿರ ಹೋಗಿ ತಟ್ಟಿದೆ. ರಾಮು ಬಂದು ಬಾಗಿಲು ತೆರೆದ.

"ಏನಪ್ಪಾ, ನಿಮ್ಮಪ್ಪಾಅವರು ಮಲಗಿದ್ದಾರೇನು?" ಎಂದು ಕೇಳಿದೆ.

ಹುಡುಗ ಮುಖ ತಗ್ಗಿಸಿಕೊಂಡು ಹಾಗೇ ನಿಂತ. ಕಣ್ಣು ನೀರು ತುಂಬಿ ಬಂದವು.

ಹುಡುಗನ ಗದ್ದ ಹಿಡಿದು ಮೇಲಕ್ಕೆತ್ತಿ "ಏನು....?" ಎಂದಿಷ್ಟೆ ಕೇಳಬೇಕಾದರೆ ಸಾಕುಬೇಕಾಯಿತು. ಮೇಲಕ್ಕೆತ್ತಿದ ಆ ಮುಗ್ಧಮುಖದ ಲ್ಲಿಯ ಕಣ್ಣುಗಳು ತೊಯ್ದು ಕೆಳಗೆ ನೋಡುತ್ತಿದ್ದವು. ಕಣ್ಣೀರು ಒಂದೇ ಸವನೆ ಗಲ್ಲದ ಮೇಲೆ ಹರಿದು ಹೋಗುತ್ತಿದ್ದವು. ಏನನ್ನೂ ಉತ್ತರ ಹೇಳದೆ ಎರಡು ಸಲ ಬಿಕ್ಕಿದ.

ಇದನ್ನು ನೋಡಿ ನನ್ನ ಎದೆ ಬಡಿದುಕೊಳ್ಳಹತ್ತಿತು. ಒಳಗೆ ತಣ್ಣೀರು ಸುರುವಿದಂತಾಯಿತು. ಕೈಕಾಲು ಥರಥರ ನಡುಗಹತ್ತಿದವು. ನಿಂತ ನೆಲವೇ ನನ್ನನ್ನೇಕೆ ನುಂಗಿಬಿಡಬಾರದು ಎನಿಸಿತು.

ಧೈರ್ಯ ತಂದುಕೊಂಡು ಹುಡುಗನನ್ನು ತಬ್ಬಿಕೊಂಡು ಕೈಯಲ್ಲಿಯ ಚೀಲ ಒತ್ತಟ್ಟಿಗಿಟ್ಟು ನಿಂತುಕೊಂಡೆ, ಗುಂಡಿನ ಬಾಯಿಗೆ ಎದುರಾಗಿ ನಿಂತವನಂತೆ.

ಅಷ್ಟರಲ್ಲಿ ಜಡಭರತರ ಹೆಂಡತಿ ಒಳಗಿನಿಂದ ಹೊರಕ್ಕೆ ಬಂದರು. ಅವರ ಮುಖವನ್ನು ನೋಡಿದ ಮೇಲಂತೂ ನನ್ನಲ್ಲಿದ್ದುಬಿದ್ದ ಧೈರ್ಯವೆಲ್ಲ ಉಡುಗಿಹೋಯಿತು. ಅವರಿಗಿಂತಲೂ ನಾನೇ ಬಿಕ್ಕಿ ಬಿಕ್ಕಿ ಅಳುವ ಹಾಗಾಯಿತು. ಆದರೆ ಆ ತಾಯಿ-ಮುಖದ ಮೇಲಿನ ಗಾಂಭೀರ್ಯವನ್ನೂ ದುಃಖವನ್ನೆಲ್ಲ ನುಂಗಿ ನಿಂತ ಅವರ ಸಹನಶೀಲ ಆಕೃತಿಯನ್ನೂ ನೋಡಿ ಗಂಡಿಸಿ ನಂಥ ಗಂಡಸಾದ ನಾನೇ ಹೆಣ್ಣಾಗಿ ತಲೆತಗ್ಗಿಸಬೇಕಾಯಿತು. ಅರೆಯೆಚ್ಚರ

ದಲ್ಲಿ ಮನಸ್ಸು ಹೊರಳಾಡುತ್ತಿತ್ತು. ಎದುರಿಗೆ ನಡೆದ ಇದೆಲ್ಲವನ್ನೂ ಅದು ಗ್ರಹಿಸಲಾರದೆ ಹೋಯಿತು. ಏನು ಮಾತಾಡುವುದಕ್ಕೂ ತಿಳಿಯದಾಯಿತು. ಹುಡುಗನ ತಲೆ ಸವರುತ್ತ "ಇ....ದು ಹೇ....ಗಾ....ಯಿ....ತು?" ಎಂದೆ.

"ದೇ....ವ....ರಿ....ಚ್ಛೆ!" ಎಂದಿಷ್ಟೆ ಆ ಹೆಣ್ಣು ಮಗಳು ಉತ್ತರ ಕೊಟ್ಟು "ಅವರು ಬರೆದ ಆ ಕಾಗದ-ಪತ್ರಗಳನ್ನೆಲ್ಲಾ ನಿಮಗೆ ಒಪ್ಪಿಸಲು ಹೇಳಿದ್ದಾರೆ." ಎಂದು ಒಳಕ್ಕೇ ಹೋಗಿಬಿಟ್ಟಳು.

ರಾಮುನನ್ನು ಕರೆದುಕೊಂಡು ಅಂದು ರಾತ್ರಿ ಹನ್ನೆರಡರ ವರೆಗೆ ಮಾತನಾಡುತ್ತ ಕುಳಿತ ಕೋಣೆಗೆ ಹೋದೆ. ಮನಸ್ಸನ್ನು ಎಷ್ಟು ಕಲ್ಲು ಮಾಡಿದರೂ ದುಃಖ ಸಹನವಾಗಲಿಲ್ಲ. ನೋಡಲಾರದೆ ಮುಖ ಮುಚ್ಚಿಕೊಂಡೆ ಒಂದು ಕ್ಷಣ ಹೊತ್ತು.

ಎಲ್ಲವೂ ಅಂದು ಇದ್ದ ಹಾಗೇ ಇತ್ತು. ದೌತಿ, ಟಾಕು, ನೋಟು-ಬುಕ್ಕುಗಳು ಎಲ್ಲಾ ಒಂದು ಮೂಲೆಯಲ್ಲಿ ಇಳಿಮುಖ ಹಾಕಿಕೊಂಡು ಕುಳಿತಿದ್ದವು! ಎಲ್ಲಾ ಇದ್ದು ಅವರಿಲ್ಲದ್ದನ್ನು ನೆನೆದು 'ಹೋ!' ಎಂದಿತು ಒಳಗೆ ಮನಸ್ಸು. ನಿಲ್ಲಲಾರದೆ ಹಾಗೇ ಹೊರಗೆ ಬಂದೆ.

ಆ ಹೆಣ್ಣು ಮಗಳಿಗೆ ಏನು ಸಮಾಧಾನ ಹೇಳಬೇಕೆನ್ನುವುದೇ ತಿಳಿಯದಾಯಿತು. ಆ ಹೆಣ್ಣು ಮಗಳ ಧೈರ್ಯ, ಮುಖದ ಮೇಲಿನ ಗಾಂಭೀರ್ಯ, ತಾಳ್ಮೆ, ಎಲ್ಲಾ ನೋಡಿ 'ಇದೇ ಜಗತ್ತಿನಲ್ಲಿ ಇಂಥಾ ಹೆಣ್ಣುಮಕ್ಕಳೂ ಇರುತ್ತಾರೆಯೇ!' ಎಂದು ಚಕಿತಗೊಂಡಿದ್ದೆ. ಜಡಭರತರ ಸಾಧನೆಯ ಪುಣ್ಯ ಫಲವಾಗಿರಬೇಕು ಆ ಶಾಂತಿ, ಆ ತಾಳ್ಮೆ, ಎನಿಸಿತು ನನಗೆ.

ಮಾತುಕತೆ ಮುಗಿಸಿಕೊಂಡು ಅಲ್ಲಿಂದ ಹೊರಬಿದ್ದು ಬಂದೆ. ಮನಸ್ಸಿನಲ್ಲಿ ಮಾತ್ರ ಒಂದು ಧ್ವನಿ ಲೊಟಗುಡಹತ್ತಿತು:

'ದಿವ್ಯಾಗ್ನಿ ತರಲು ಹೊರಟ ರಾಜ ಆ ಅಗ್ನಿಗೇ ತನ್ನನ್ನು ಆಹುತಿ ಕೊಟ್ಟಂತಾಯಿತು ಇದೂ! ನೀ....ನೇ ಇ....ದ....ಕ್ಕೆ....'

ಈ ಹೊತ್ತಿಗೂ ಈ ಒಂದು ಮುಳ್ಳು ನನ್ನ ಮನಸ್ಸಿನಲ್ಲಿ ನಟ್ಟು ನಿಂತು ಅಳುಕುತ್ತಿದೆ.

—ಸಂಪಾದಕ

---

# ಮುನ್ನುಡಿ

ಶ್ರೀಮಾನ್ ಜಿ. ಬಿ. ಜೋಶಿಯವರು ಕಟ್ಟಕಡೆಗೊಮ್ಮೆ 'ಜಡ ಭರತ'ರ ಕನಸುಗಳ ಒಂದು ಕಟ್ಟನ್ನು ಅಚ್ಚುಕಟ್ಟಾದ ಒಂದು ಕಥಾ ರೂಪಕ್ಕೆ ಇಳಿಸಿದರು. ಅವರ ಇನ್ನಿತರ ಕನಸುಗಳು ಮತ್ತೆಂದು ಕಣ್ದೆರೆಯುವವೋ ನೋಡಬೇಕು. ಬಹಳ ವರ್ಷಗಳ ಪೂರ್ವದಲ್ಲಿ ನನ್ನ ಗೆಳೆಯರಾದ ಪ್ರೊ. ಮುಗಳಿಯವರು ಇದರೊಳಗಿನ ನಾಲ್ಕು ಕನಸುಗಳಿಗೆ ದೃಶ್ಯದ ರೂಪ ತೊಡಿಸಿದ್ದರು. 'ಪಾವನ ಪಾವಕ' ಎಂದು ಆ ಕೃತಿ ಹಿಂದೆಯೆ ಪ್ರಸಿದ್ಧವಾಯಿತು. ಅಂದಾದ ಆನಂದದ ಇಮ್ಮಡಿ ಮುಮ್ಮಡಿಯಷ್ಟು ಆನಂದ ಇಂದು ಈ ಕೃತಿಯನ್ನು ಕಂಡು ನನಗಾಗುತ್ತಿದೆ.

ಇವು ಹೇಳಿಕೇಳಿ ಕನಸುಗಳು. ಎಂದರೆ ದ್ರವ್ಯ ನಿಜವಾದ ಕನಸಿನದು. ಪಾಕ ಸಾಹಿತ್ಯದ್ದು. ಅವುಗಳ ಮೂಲಕ್ರಮ ಏನೇ ಇದ್ದರೂ ಅವುಗಳನ್ನು ಹೊಂದಿಸಿದ ಅನುಕ್ರಮದಿಂದ ಕನಸುಗಳಿಗೆ ಒಡಗತೆಯ ರೂಪ ಬಂದಿದೆ. ಇದೊಂದು ಆದರ್ಶವಾದಿಯ ಮನೋರಾಜ್ಯದ ಒಂದು ರೂಪಕ ಎಂದರೂ ಸಲ್ಲುವದು. ಆದರೆ ಇವುಗಳಲ್ಲಿ ಸಾಮಾನ್ಯ ಕತೆ ಕಾದಂಬರಿಗಳಿಗಿರುವುದಕ್ಕಿಂತ ಪ್ರಬಲತರವಾದ ಒಂದು ವಿಶೇಷ ವ್ಯಂಜನಾಸಾಮರ್ಥ್ಯವಿದೆ. ಇವುಗಳಿಗೆ ಹಾಕಿದ ಸಾಹಿತ್ಯದ ಒಪ್ಪವು ಜಡಭರತರೇ ಬರೆದ 'ಧರ್ಮಸೆರೆ' ಕಾದಂಬರಿಯ ಶೈಲಿಗಿಂತ ಮಿಗಿಲಾದದ್ದಾಗಿದೆ. ಈ ಕೃತಿಯನ್ನು ಓದಿ ಕನ್ನಡ ಜನ ಮೆಚ್ಚುವದು ಎಂದು ನಾನು ನಂಬಿದ್ದೇನೆ. ಇದರಲ್ಲಿ ಸಾಹಿತ್ಯದ ಎಲ್ಲ

ಉತ್ತಮ ಗುಣಗಳೂ ಇವೆ. ಹೀಗಿದ್ದೂ ಒಂದು ಬಗೆಯ ವಾಸ್ತವರುಚಿಗೆ ಇವು ಅಷ್ಟು ಸರಿದೋರಲಾರವು. ಆದರೆ ವಾಸ್ತವಿಕತೆ ಕೈಯೂರಿದಲ್ಲಿಯೆ ಕಲ್ಪಕತೆ ಕಾಲೂರಿ ಚಿಗರುತ್ತದೆ. ಅದರಲ್ಲಿಯೂ ಶುದ್ಧ ಅಂತಃಪ್ರಜ್ಞೆಯ ಚಿತ್ರಕಶಕ್ತಿಯ ವಿಲಾಸವು ಇಲ್ಲಿ ಒಡಮುರಿದು ಎದ್ದಿರುವುದರಿಂದ ಎಂಥ ಬಹಿಃಪ್ರಜ್ಞ ಕೃತಿವಂತಿಕೆಗೂ ಇರದ ಒಂದು ಲಾವಣ್ಯವು ಇವುಗಳಲ್ಲಿ ಮೈದೋರಿದೆ ಎಂದು ಹೇಳಿದರೆ ಪೂರ್ವಗ್ರಹದೋಷವಿಲ್ಲದ ಯಾವ ರಸಿಕನೂ ಒಪ್ಪಬಹುದು. 'ಲಾಂಗ್‌ಫೆಲೊ'ನ 'ಎಕ್ಸೆಲ್ಸಿಯರ್' (ಸಣ್ಣ ಕವನ) 'ಡಿಫೊ'ನ 'ರಾಬಿನ್‌ಸನ್ ಕ್ರುಸೋ' 'ಬನಿಯನ್'ನ 'ಪಿಲ್ಗ್ರಿಮ್ಸ್ ಪ್ರೊಗ್ರೆಸ್' (ಕಾದಂಬರಿ ಕೃತಿ) 'ಇಬ್ಸೆನ್'ನ 'ಬ್ರ್ಯಾಂಡ್' (ನಾಟಕ) ಇವುಗಳಲ್ಲಿಯಂತೆ ಇಲ್ಲಿಯ ರೂಪಕದ ಬೆನ್ನಹುರಿಗೆ ಒಂದು ಅನುಭವದ ಕೆಚ್ಚಿದೆ. ಇದೇ ಬಗೆಯ ಆಧ್ಯಾತ್ಮ್ಯ ಕತೆಗಳು ಯೋಗವಾಸಿಷ್ಠದಲ್ಲಿ ತತ್ವದ್ಯೋತಕವಾಗಿ ಬರುವವು. ಅದೆಲ್ಲ ಮಾನವತೆಯ ಅಂತಃಸಾರದ ಅನುಭವ.

ಪ್ರಜೆಗಳನ್ನು ಹುಟ್ಟಿಸಿದ ಪ್ರಜಾಪತಿಯೆ ಪ್ರತಿಜೀವಸ್ಥಂಡಿಲದಲ್ಲಿ ಜೀವದ ಅಗ್ನಿಯನ್ನು ಸ್ಥಾಪಿಸಿ ಯಜ್ಞಪ್ರಾರಂಭವನ್ನು ಮಾಡಿದನು. ಆದರೆ ಹೊಗೆಯೊಳಗೆ ಬೆಂಕಿಯಡಗುವದುಂಟು. ಕಾಣಿಕೆಯೆ ಇರುವಿಕೆಯನ್ನು ಮುಚ್ಚುವದುಂಟು. ಆಗ ಅರಿವು ತನ್ನ ದಿವ್ಯಾಗ್ನಿಶೋಧನೆಗಾಗಿ ಹೊರಡುವದು. ತನ್ನ ಶೋಧದ ಕೊನೆಗೆ ದಿವ್ಯತೆಯ ಮಾನದಂಡಗಳನ್ನು ಕಾಣುವದು. ಇಲ್ಲಿಯ ರೂಪಕದಲ್ಲಿ ಅಂಥ ಒಂದು ದರ್ಶನವನ್ನು ಒಂದು ಆಕೃತಿಯಾಗಿ ರಚಿಸಿದ್ದಾಗಿದೆ. ಹೇಳಿಕೆಗೆ ಕಾವ್ಯದ ಸೊಗಸೂ, ಕಾದಂಬರಿಯ ಕಲ್ಪಕತೆಯೂ ಬಂದಿದೆ. ಶೈಲಿಯ ಪ್ರಸನ್ನತೆಯು ಅಡಗಿಸಿದ ಚಿತ್ರಕ್ಕೆ ಕನ್ನಡಿಯ ಕಟ್ಟನ್ನು ಹಾಕಿದೆ. ಇಂಥ ಕೃತಿಯನ್ನು ಕನ್ನಡ ಕೃತಿಮಾಲೆಗೆ ಸೇರಿಸಿ ಇಂದಿನ ಸಾಹಿತ್ಯದ ಕಳೆಯನ್ನು ಜಡಭರತರು ಹೆಚ್ಚಿಸಿದ್ದಾರೆ. ಈ ಕೃತಿಯು ಅವರ ಮುಂದಿನ ಕೃತಿಗಳಿಗೆ ತೆರೆದ ಬಾಗಿಲಾದೀತೆಂದು ನಾನು ಆಶಿಸುತ್ತೇನೆ.

೧೫-೯-೧೯೪೯. ದ. ರಾ. ಬೇಂದ್ರೆ

# ಅರ್ಪಣ

ದಿವ್ಯಾಗ್ನಿಯನ್ನು ಪಡೆಯುವುದಕ್ಕಾಗಿ
ಅದೃಷ್ಟದ ಬೆನ್ನುಹತ್ತಿದ
**ಆಧ್ಯಾತ್ಮಜೀವಿಗಳಿಗೆ**

— ಜಡಭರತ.

# ಪರಿವಿಡಿ







## ದಿವ್ಯಸಂದೇಶ

ಅಶರೀರವಾಣಿಯೊಂದು ಕೇಳಿಸಿತು :

" ಏಳು ! ಹೊರಡು !
ಮಾನವಕುಲ ಕಲ್ಯಾಣಕ್ಕಾಗಿ ದಿವ್ಯಾಗ್ನಿಯನ್ನು ಹುಡುಕಿ ತಾ.
ನಿಲ್ಲಬೇಡ; ತಡವರಿಸಬೇಡ; ಏಳು, ಹೊರಡು ಬೇಗ.
ಹುಂ, ಇಡು ಹೆಜ್ಜೆ ಮುಂದೆ.
ಜೋಕೆ !
ಭಯ ತಡೆಗಟ್ಟೀತು. ಮೋಹ ಕಣ್ಣಿಗೆ ಕತ್ತಲುಗುಡಿಸೀತು.
ಎಚ್ಚರಿಕೆ !
ಕಾಲ ಕೆಳಗಿನ ನೆಲ ಕುಸಿದೀತು. ನಿರುತ್ಸಾಹ ಹಿಡಿವ ದಾರಿಯನ್ನೂ ಮರೆಮಾಡೀತು.
' ಯಾಕೆ ? ಏತಕ್ಕೆ ? ' ಎನಬೇಡ.
ಮುಂದಿಟ್ಟ ಅಡಿ ಹಿಂದಿಡಬೇಡ.
ಏಳು, ಹೊರಡು ! ನಡೆ ಮುಂದೆ !
ಜೀವರಸದಲ್ಲಿಯ ಪಾಪದ ಕಸರನ್ನು ಸುಡುವುದಕ್ಕಾಗಿ,—
ದೃಷ್ಟಿಗೆ ದೃಷ್ಟಿಯನ್ನು ಕೊಡುವುದಕ್ಕಾಗಿ,—
ಕುದಿಸಿ ಕುದಿಸಿ ಮಾತಿನ ಅಮೃತಸತ್ವ ತೆಗೆಯುವುದಕ್ಕಾಗಿ,—
ಜೀವ ಜೀವಕ್ಕೂ ಬೆಸಗೆ ಹಾಕುವುದಕ್ಕಾಗಿ,—
ಆ ದಿವ್ಯಾಗ್ನಿಯನ್ನು ಪಡೆದುಕೊಂಡು ಬಾ.
ನಿಲ್ಲಬೇಡ, ನಡೆ ! ನಡೆ ! ನಡೆ ! "

* * * *

ಅರಮನೆಯ ಶೃಂಗಾರಗೃಹದಲ್ಲಿ ರಾಜವೈಭವವನ್ನನುಭವಿಸುತ್ತಿದ್ದ ನನ್ನ ಕಿವಿಗೆ ಈ ಮಾತುಗಳು ಮುಟ್ಟಿದ್ದೊಂದೇ ತಡ,—ಜೀವಸ್ವರ ಮಿಡಿದಂತಾಗಿ—ನನ್ನ ಮೈ ಮನಸ್ಸು ಕೂಡಿಯೆ ಆ ಅಶರೀರವಾಣಿಗೆ ಬಾಗಿದವು; ಹೊರಡಲು ಒಪ್ಪಿಕೊಂಡವು.

ಎದ್ದೆ. ಸಾಂಕೇತಿಕ ಧ್ವನಿಯೊಂದು ದೂರದಿಂದ ಬಂದು,—ಸಮಯ ಮಧ್ಯರಾತ್ರಿಗೂ ಮೀರಿತು—ಎಂದು ನನಗೆ ನೆನಪು ಕೊಟ್ಟಿತು.

ಧ್ವನಿಗೆ ಪ್ರತಿಧ್ವನಿ ನಡೆಯಿತು ಕೆಲಹೊತ್ತು.

ಒಂದು ಹೆಜ್ಜೆ ಮುಂದಿಟ್ಟೆ.

ಆ ಧ್ವನಿ ನಿಂತಿತು. ಆದರೆ ಅಲ್ಲಿಯೆ ಸುವರ್ಣಪಂಜರದಲ್ಲಿದ್ದ ಪಂಡಿತವಕ್ಕಿ ನನ್ನನ್ನು ಕಂಡಾಕ್ಷಣ ವಂದಿಮಾಗಧರ ಕಾರ್ಯವನ್ನೆ ಕೈಕೊಂಡಿತು.

'ಅಯ್ಯೊ, ಎಲ್ಲರನ್ನೂ ಎಚ್ಚರಗೊಳಿಸಿಬಿಡುತ್ತದಲ್ಲಾ ಇದು!' ಎಂದು ಅವಸರದಿಂದ ಅದರ ಹತ್ತಿರ ಹೋಗಿ, ಅದಕ್ಕೆ ಕೈಕೊಟ್ಟು ಸುಮ್ಮನಿರಲು ಸೂಚಿಸಿ ಮತ್ತೆ ಮುಂದೆ ನಡೆದೆ.

ಅಷ್ಟರಲ್ಲಿ ಮಗು ಅಳಹತ್ತಿತು. ಅರಸಿ ಎದ್ದಳು.

ಹೊರಳಿ ನೋಡಿದೆ.

ಅರಸಿಗೆ ನಾನು ಅಲ್ಲಿದ್ದದ್ದು ತಿಳಿಯಲಿಲ್ಲ. ಅವಳು ಎದ್ದು ಮಗುವನ್ನು ಕರೆದುಕೊಂಡು ಸಮಾಧಾನ ಪಡಿಸಲೆತ್ನಿಸಿದಳು. ಮಗು ಅಳುವನ್ನು ನಿಲ್ಲಿಸಲಿಲ್ಲ. ಎದ್ದು ಅಲ್ಲಿಂದ ಒಳಗೆ ಹೋಗಬೇಕೆಂದಳು.

ಪಂಡಿತವಕ್ಕಿ ಮತ್ತೆ ಕೂಗಿತು ನನ್ನ ಹೆಸರೆತ್ತಿ.

ಅರಸಿ ಪಂಜರದ ಕಡೆಗೆ ನೋಡಿದಳು. ಪಂಡಿತವಕ್ಕಿ ಮತ್ತೆ ಹಾಗೇ ಕೂಗಿತು. ಅದನ್ನು ಕೇಳಿ ಕೂಸು ಸುಮ್ಮನಾಯಿತು.

ಸುಮ್ಮನಾದ ಕೂಸನ್ನು ತೊತ್ತಿನ ಕೈಯಲ್ಲಿ ಕೊಟ್ಟು ಅವಳೊಡನೆ ರಾಣೀಮಂದಿರಕ್ಕೆ ಹೊರಟಳು ಅರಸಿ.

'ಇವಳಿಗೆ ನಾನು ಹೊರಟುಹೋದದ್ದು ನಾಳೆ ತಿಳಿದಾಗ ಇವಳ ಗತಿ ಏನಾಗುವದೊ! ಏನೆಂದುಕೊಳ್ಳುವಳೊ! ಮಗು ಏನೆಂದೀತು? ಮುಪ್ಪಿನ ತಂದೆ ತಾಯಿ ಬದುಕಿ ಉಳಿಯಬಹುದೇ? ಅಕ್ಕ ಶರೂ, ತಂಗಿ ನಿರ್ಮಲಾ

ನಾನಿಲ್ಲದೆ ಊಟಮಾಡಬಹುದೇ ?'

ಇದನ್ನೆಲ್ಲ ನೆನೆದು ಜೀವ ಹಿಂದಕ್ಕೂ ಮುಂದಕ್ಕೂ ಹೊಯ್ದಾಡ ಹತ್ತಿತು. ಅನಿಶ್ಚಯ ಇಣಿಕಿನೋಡುವದರಲ್ಲಿತ್ತು. ಅಷ್ಟರಲ್ಲಿ ಅಶರೀರವಾಣಿ ನನ್ನನ್ನು ಎಚ್ಚರಿಸಿತು.

ಪುನಃ ಧೈರ್ಯ ಬಂತು. ಅಡಿ ಕಿತ್ತಿ ಮುಂದಿಟ್ಟೆ.

ಇಷ್ಟರಲ್ಲಿ ನಾನು ಹೊರಟು ನಿಂತ ವಿಷಯ ಅರಮನೆಯಲ್ಲೆಲ್ಲ ತಿಳಿದುಬಿಟ್ಟಿತು.

ಮುಪ್ಪಿನ ತಂದೆ ಬಂದು 'ಎಲ್ಲಿಗೆ ಹೊರಟಿದ್ದೀಯಪ್ಪಾ ಈ ಅಪ-ರಾತ್ರಿಯಲ್ಲಿ? ಏನು, ದಂಡಯಾತ್ರೆಗೇ? ಏನು, ರಾಜಕಾರಣವೇ? ಏತಕ್ಕಾಗಿ?" ಎಂದು ಕೇಳಿದರು.

"ಯಾವುದೂ ಅಲ್ಲ. ದಿವ್ಯಾಗ್ನಿ ತರಲು ಹೊರಟಿದ್ದೇನೆ" ಎಂದೆ.

"ಏನು ಹಾಗೆಂದರೆ? ಎಲ್ಲಿದೆ ಅದು? ನಿನಗೆ ಸಿಕ್ಕುತ್ತದೆಯೇ? ಯಾರು ಹೇಳಿದರು ನಿನಗದನ್ನು ತರಲು? ಅದು ಬರಿ ಕಲ್ಪನೆ, ಭ್ರಮೆ. ಯಾರಿಗೆ ಸಿಕ್ಕಿದೆ? ಯಾರು ತಂದಿದ್ದಾರೆ? ಹೋದವರೆಲ್ಲ ಮರಳಿ ಬಂದಿಲ್ಲ. ನಿನಗೇಕೆ ಆ ಹುಚ್ಚು?" ಎಂದರು.

"ಅಶರೀರವಾಣಿ ಹೇಳಿತು. ಸಿಗುತ್ತದೆ. ಅಂತೇ ಹೊರಟಿದ್ದೇನೆ. ನನ್ನನ್ನು ಯಾರೂ ತಡೆಯಬೇಡಿರಿ."

"ಹಾಗೆಂದರೆ ಹೇಗೆ? ರಾಜ್ಯಸೂತ್ರ ನಡೆಸುವವರು ಯಾರು? ನಮ್ಮನ್ನು ಈ ಮುಪ್ಪಿನಲ್ಲಿ ಸಂರಕ್ಷಿಸುವವರು ಯಾರು? ನಿನ್ನ ಕೈಹಿಡಿದ ಅರಸಿ ಲಕ್ಷ್ಮಿಯ ಗತಿ ಏನು? ಈ ಹುಚ್ಚು ಬಿಟ್ಟುಬಿಡು."

"ಬಿಡಲಾರೆ. ನಾನೀಗ ಪರಾಧೀನ. ರಾಜ್ಯ ತನ್ನದನ್ನು ತಾ ನೋಡಿ-ಕೊಳ್ಳುತ್ತದೆ. ಅದಕ್ಕೆ ನನ್ನ ಅಗತ್ಯವಿಲ್ಲ. ಉಳಿದವರೂ ತಾಳಬೇಕು. ಆಯಿತು, ಹೊತ್ತಾಯಿತು. ತಡೆಯಬೇಡಿರಿ. ನಾನು ಹೊರಟೆ." ಎಂದು ಹೆಜ್ಜೆ ಮುಂದಿಟ್ಟೆ.

ಅರಸಿ, ಅಕ್ಕ, ತಂಗಿ ಬಂದು ಅಡ್ಡಗಟ್ಟಿದರು. ಅರಸಿಯ ಕೈಯಲ್ಲಿದ್ದ ನನ್ನ ಮಗು ತೊದಲುತೊದಲಾಗಿ ನನ್ನ ಹೆಸರನ್ನೆತ್ತಿ ನನ್ನ ಹತ್ತಿರ ಬರುತ್ತೇನೆಂದು ಕೈಮಾಡಹತ್ತಿತು.

ಮನಸ್ಸು ಮತ್ತೆ ಇತಿಮಿತಿಗೊಳಗಾಯಿತು. ಅಧೈರ್ಯ ಸಮಯ ಸಾಧಿಸಿ ಒಳಗೆ ಬರಬೇಕೆಂದು ಕಾಯ್ದು ನಿಂತಿತ್ತು. ಮತ್ತೆ ಅಶರೀರವಾಣಿ ನೆರವಿಗೆ ಬಂತು. ಕೊನೆಯ ನಿರ್ಧಾರಮಾಡಿ "ಬೇಗನೆ ಬರುತ್ತೇನೆ. ಅಲ್ಲಿಯ ವರೆಗೆ ಹೇಗಾದರೂ ತಾಳಿಕೊಳ್ಳಿರಿ." ಎಂದು ಹೇಳಿ ಎಲ್ಲರನ್ನೂ ಸರಿಸಿ ಮುಂದಕ್ಕೆ ಹೊರಟೇಬಿಟ್ಟೆ.

"ಹೋ!" ಎಂದು ಎಲ್ಲರೂ ಕೂಗಿಕೊಂಡರು. ತಾಯಿ ಮಾತ್ರ ಅಂಥದರಲ್ಲಿಯೂ ತನ್ನ ದಃಖವನ್ನೆಲ್ಲ ನಂಗಿಕೊಂಡು, ಮುಂದೆ ಬಂದು "ಮಗು, ನೀನು ತಿರುಗಿ ಬಂದದ್ದನ್ನು ನನ್ನ ಕಣ್ಣು ನೋಡಲಿ. ನಿನ್ನ ಕೆಲಸ ಕೈಗೂಡಲಿ. ನನ್ನ ಆಶೀರ್ವಾದ ನಿನ್ನ ರಕ್ಷಣೆಗಿರಲಿ. ಹೋಗಿ ಬಾ." ಎಂದು ನನ್ನ ತಲೆ ಮುಟ್ಟಿ ಮೂಸಿದಳು. ಒಂದೆರಡು ಹನಿಗಳೂ ಉದುರಿದವು.

ತಾಯಿಗೆ ನಮಸ್ಕರಿಸಿ ನೂರ್ಮಡಿ ಉತ್ಸಾಹದಿಂದ ಮುಂದೆ ಹೊರಟೆ.

ರಾಜವೇಷವನ್ನೆಲ್ಲ ಬದಲಿಸಿಕೊಂಡಿದ್ದೆ. ಯಾರೂ ನನ್ನನ್ನು ರಾಜ-ನೆಂದು ಗುರುತಿಸುವಂತಿದ್ದಿಲ್ಲ.

ರಾಜಧಾನಿಯಲ್ಲಿ ಹೊರಟಾಗ ಆಯಕಟ್ಟಿನ ಒಂದೆರಡು ಸ್ಥಳಗಳಲ್ಲಿ ರಕ್ಷಕರು ತಡೆದು ನಿಲ್ಲಿಸಿದರು. ಅಂದಿನ ಸಂಕೇತ ಹೇಳಿ ಅವರಿಂದ ಪಾರಾಗಿ ಮುಂದೆ ಹೊರಟೆ. ಹೀಗೇ ಯುಕ್ತಿ ಪ್ರಯುಕ್ತಿಗಳಿಂದ ಏಳು ಕೋಟೆಯ ಏಳು ಮಹಾದ್ವಾರಗಳನ್ನೂ ದಾಟಿ ಹೊರಗೆ ಬಂದೆ.

ಬಂದೊಡನೆ ಅಲ್ಲಿಯೆ ಸಮೀಪದಲ್ಲಿದ್ದ ಜೋಡುತೀರ್ಥಗಳ ನೆನ-ಪಾಯಿತು. ಶರಪಂಜರದ ಮೇಲಿದ್ದ ಭೀಷ್ಮರ ಆತ್ಮದಾಹವನ್ನು ತಣಿಸಿದ 'ಅಂಬುತೀರ್ಥ' ಒಂದು. ಯಾವುದೋ ಋಷಿಯ ತಪ್ಪಸ್ಸಿನ ಫಲವಾಗಿ ಹುಟ್ಟಿ ಬಂದ 'ಧನ್ವಂತರಿ ತೀರ್ಥ' ಇನ್ನೊಂದು. ಈ ಜೋಡು ತೀರ್ಥಗಳ ಮಧ್ಯದಲ್ಲಿ ಆಲದ ಮರವೊಂದು ಪುರಾತನ ಕಾಲದಿಂದಲೂ ಬೆಳೆದುನಿಂತಿದೆ.

ಅಲ್ಲಿಗೆ ಹೋಗಿ ಆ ಪವಿತ್ರ ಜಲವನ್ನು ಕುಡಿದು, ಆಲದಮರದ ನೆರಳಿನ ಆಶೀರ್ವಾದ ಪಡೆದು, ಮುಂದಿನ ಪಯಣ ಬೆಳೆಸಿದರೆ ಹಸಿವೆ ನೀರಡಿಕೆ ಎರಡೂ ನನ್ನನ್ನು ಬಾಧಿಸಲಾರವು ಎಂದು ನಂಬಿ ಅತ್ತಕಡೆ ಹೊರಟೆ.

ಪಾದರಕ್ಷೆಗಳನ್ನು ದೂರ ಬಿಟ್ಟು ಅಂಬುತೀರ್ಥದಲ್ಲಿ ಮೊದಲು ಇಳಿದು,

ಜಲದೇವತೆಗೆ ನಮಿಸಿ, ಬೊಗಸೆಯಿಂದ ಒಂದಿಷ್ಟು ನೀರು ಕುಡಿದು, ಕಣ್ಣಿಗಷ್ಟು ಹಚ್ಚಿಕೊಂಡು ಮೇಲಕ್ಕೆ ಬಂದು, ಧನ್ವಂತರಿ ತೀರ್ಥಕ್ಕೂ ಹೋಗಿ ಅಲ್ಲಿಯ ತೀರ್ಥವನ್ನೂ ಕುಡಿದು ಬಂದು, ಆಲದ ಮರದ ನೆರಳಿನಲ್ಲಿ ಒಂದು ಗಳಿಗೆ ಕುಳಿತೆ. ಹಾಯೆನಿಸಿತು. ಮುಂದಿನ ದಾರಿ ನಡೆಯಲು ಹೊಸ ಹುಮ್ಮಸು ಬಂತು. ನನ್ನನ್ನು ಆ ದಿವ್ಯಾಗ್ನಿಗೆ ಒಯ್ದು ಮುಟ್ಟಿಸುವ ದಾರಿಯಲ್ಲಿಯೆ ನಡೆಯಿಸಬೇಕೆಂದು ಸತ್ಯಸಂಧನಾದ ಭೀಷ್ಮನಿಗೆ ಬೇಡಿಕೊಂಡು ಅಲ್ಲಿಂದೆದ್ದು ಮುಂದೆ ಹೊರಟೆ. ರಾಜಮಾರ್ಗ ಬಿಟ್ಟು ಕಾಲುದಾರಿ ಹಿಡಿದೆ.

( ೭–೨–೧೯೩೯ )

## ನರಭಕ್ಷಕ

ಆ ಕಾಲುದಾರಿ ಒಂದು ನಿಬಿಡವಾದ ಅರಣ್ಯದಲ್ಲಿ ಹೋಗಿತ್ತು. ಆ ಅರಣ್ಯದಾಚೆ ಮಹಾಪರ್ವತವೊಂದು ಅತಿ ಕಪ್ಪಾಗಿ ಕಾಣುತ್ತಿತ್ತು. ನಾನು ಹಿಡಿದ ಕಾಲುದಾರಿ ಅರಣ್ಯದೊಳಗಿಂದ ಹಾಯ್ದು ಆ ಮಹಾಪರ್ವತವನ್ನು ಸುತ್ತು ಹಾಕಿತ್ತು.

ಮೈಯ ಪರಿವೆಯಿಲ್ಲದೆ ಮುಂದೆ ಮುಂದೆ ಸಾಗಿದ್ದೆ.

ಆ ಮಹಾಪರ್ವತದ ತಡಿಯಲ್ಲಿ, ಹೆಮ್ಮರಗಳ ಗುಂಪಿನಲ್ಲಿ, ಭವ್ಯ ಬಂಡೆಗಳ ಮಗ್ಗುಲಲ್ಲಿ, ಮಾನವನ ಕಣ್ಣುಸುಳಿ ತಪ್ಪಿಸಿ, ಒಂದೇ ಒಂದು ಕಮಾನಿನ ಮಹಾದ್ವಾರವೊಂದು ಮಸಕುಮಸಕಾಗಿ ಕಾಣಹತ್ತಿತು. ದೂರದಿಂದ ಕಮಾನು ಒಂದಿಷ್ಟು ಸಣ್ಣದಾಗಿ ಕಂಡರೂ ಹತ್ತಿರ ಹೋಗಿ ನೋಡಿದರೆ, ಕಣ್ಣುಗುಡ್ಡೆ ಹುಬ್ಬನ್ನೆ ಮುಟ್ಟುತ್ತಿದ್ದವು. ಅದರ ಒಳಗೆ ತುಂಬಿದ ಕತ್ತಲೆಯನ್ನು ನೋಡಿದಾಗ, ಅದೇನು ಹೊರಗಿನ ಬೆಳಕನ್ನೆಲ್ಲ ಒಮ್ಮೆಗೆ ನುಂಗಲು 'ಆ'ಯೆಂದು ಬಾಯಿ ತೆರೆದು ಕೂತಂತೆ ತೋರುತ್ತಿತ್ತು. ಹತ್ತಿರ ಹೋಗಿ ಸ್ವಲ್ಪ ದಿಟ್ಟಿಸಿ ನೋಡಿದಾಗಂತೂ ಅಲ್ಲಿಯ ಆ ರುದ್ರಭಯಾನಕ

ದೃಶ್ಯವು ಎಂತಹ ಎಂಟೆದೆಯನ್ನೂ ನಡುಗಿಸುವಂತಹದಿತ್ತು.

ಆ ಕಮಾನಿಗೆ ಸಾಲು ಹಿಡಿದು ನಾನಾ ಪಶುಗಳ ರುಂಡಗಳ ತೋರಣ ವನ್ನು ಕಟ್ಟಿತ್ತು. ರಕ್ತದಿಂದ ಸಾರಣೆ ಕಾರಣೆ ಮಾಡಿದ ಗೋಡೆಗಳ ಮೇಲೆ ವಿಕಾರ ವಿಕಾರವಾದ ಕಣ್ಣುಗಳನ್ನು ನಾನಾಬಗೆಯ ಸುಳಿಗಳಲ್ಲಿ—ಸುವರ್ಣ ಪ್ರಭಾವಳಿಗೆ ವಜ್ರ, ವೈಡೂರ್ಯ, ಹವಳ, ಮುತ್ತು, ಪಚ್ಚ, ನೀಲಗಳ ಕುಂದಣ ಕೂಡಿಸಿದಂತೆ—ಹೊಂದಿಸಿದ್ದರು. ಕಮಾನಿನ ಮಧ್ಯದಲ್ಲಿ ಅದೇ ಕೊಯ್ದು ತಂದ ಕುರಿಗಳ ಮುಖಗಳು ಕಣ್ಣುಬಿಡುತ್ತ ಜೋತುಬಿದ್ದಿದ್ದವು. ಗೋಡೆಗಳಲ್ಲಿ ನಾನಾಬಗೆಯ ಆಯುಧಗಳನ್ನು—ಹತ್ತಿರ ಹಾಯ್ದರೆ ಚುಚ್ಚುವ ಹಾಗೆ—ನೆಟ್ಟಿದ್ದರು. ಕಮಾನಿನ ಗೋಡೆಯಲ್ಲಿಯೂ ಸಹ ನಾಲ್ಕು ಬೆರಳಿನ ಅಂತರ ಬಿಟ್ಟು ಒಂದೊಂದರಂತೆ ಒಳ್ಳೆ ಹದನಾದ ಬರ್ಜಿ ಗಳನ್ನು ಅಲುಗಾಡದಂತೆ ಗಟ್ಟಿಯಾಗಿ ನೆಟ್ಟಿದ್ದರು. ಆ ಬರ್ಜಿಗಳು ವರ್ತುಳಾ ಕಾರವಾಗಿ ಬಂದು ಮಧ್ಯಬಿಂದುವಿನಲ್ಲಿ ಕೂಡಿದ್ದವು. ಆ ಕೂಡಿದ ಸ್ಥಳವೇ ಒಳಗೆ ಹೋಗುವುದಕ್ಕೆ ದ್ವಾರವಾಗಿತ್ತು. ದ್ವಾರ ಮುಚ್ಚಿದಾಗ ಯಾರಿಗೂ ಗಾಯ ಹೊಂದದೆ ಒಳಗೆ ಹೋಗಲು ಸಾಧ್ಯವಿರಲಿಲ್ಲ. ಆ ಬರ್ಜಿಗಳ ಹಿಂದೆ ಎತ್ತರವಾದ ಇನ್ನೊಂದು ಕಬ್ಬಿಣದ ಬಾಗಿಲಿತ್ತು. ಮುಚ್ಚಿತ್ತು.

ನಾನು ಅಲ್ಲಿಗೆ ಹೋದಾಗ ಮೂರು ಸಂಜೆಯಾಗಿತ್ತು. ಮಂದವಾದ ಕೆಂಬೆಳಕು ಮಹಾದ್ವಾರದ ಮೇಲೆ ಬಿದ್ದು ಅದನ್ನು ಮತ್ತಿಷ್ಟು ಭಯಾನಕ ಕಾಣುವ ಹಾಗೆ ಮಾಡಿತ್ತು. ಅದನ್ನೆಲ್ಲ ನೋಡಿ ನನ್ನ ಎದೆ ನಡುಗಿತು; ಮೈ ಜುಮ್ಮೆಂದಿತು. ಮನಸ್ಸಿನ ಮುಖ ಅರಮನೆಯ ಕಡೆಗೆ ಸ್ವಲ್ಪ ಹೊರ ಳಿತು. ದಿವ್ಯಾಗ್ನಿಯ ನೆನಪು ಬಂದು ಮತ್ತೆ ಧೈರ್ಯ ತುಂಬಿತು, ಮಹಾ ದ್ವಾರದ ಕಡೆಗೆ ಸಾಗುವಂತೆ ಮಾಡಿತು.

ಮಹಾದ್ವಾರದ ಎದುರಿಗೇ ಒಂದು ಹೆಮ್ಮರವು ಸುಳಿಗಾಳಿಗೆ ತಲೆ ಹಾಕುತ್ತ ನಿಂತಿತ್ತು. ಆ ಮರಕ್ಕೆ ಒಂದು ಜಾತಿಯ ಕಾಡುಬಳ್ಳಿ ಸುತ್ತಿ ಕೊಂಡಿತ್ತು. ಸುತ್ತುಮುತ್ತೆಲ್ಲ ಹಸಿರು ಮುರಿಯುವ ಎಳೆಹುಲ್ಲು, ಯಾರ ತುಳಿತದ ಭಯವೂ ಇಲ್ಲದೆ ನಿರಾತಂಕವಾಗಿ ಬೆಳೆದು ನಿಂತಿತ್ತು.

ಮಹಾದ್ವಾರದ ಹಿಮ್ಮಗ್ಗಲಿದ್ದ ಪರ್ವತದಾಚೆಯಿಂದ ಜಲಪ್ರವಾಹದ ಸತತವಾದ ಗಂಭೀರಧ್ವನಿಯೊಂದು ಅಲ್ಲಿಯ ಮೌನಗೀತಕ್ಕೆ ಶ್ರುತಿ ಹಿಡಿದಿತ್ತು.

ಗುಡ್ಡದೋರೆಯಿಂದ ಮಹಾಶಬ್ದವೊಂದು ಬಂದು ನನ್ನ ಎದೆಯನ್ನು ನಡುಗಿಸಿತು. ಸ್ವಲ್ಪ ಗಾಬರಿಯಾಗಿ ಅತ್ತಿತ್ತ ನೋಡಿದೆ.

ಒಂದು ವಿಚಿತ್ರವಾದ ಆಕೃತಿಯು ಮದೋನ್ಮತ್ತನಂತೆ ಜೋಲಿ ಹೊಡೆಯುತ್ತ ಸ್ವೇಚ್ಛೆಯಿಂದ ಕೈಕಾಲುಗಳನ್ನು ಬೀಸುತ್ತ, ಕಾಲ ಕೆಳಗೆ ಸಿಕ್ಕು ಮುದುಡಿಹೋಗುತ್ತಿದ್ದ ಎಳೆಹುಲ್ಲನ್ನು ಲೆಕ್ಕಿಸದೆ ನಾನು ನಿಂತಿರುವ ಕಡೆಗೇ ಧುಮುಕಿ ಬರುತ್ತಿರುವಂತೆ ಕಂಡಿತು. ಅಂಜಿ ಮೆಲ್ಲನೆ ಮರದ ಮರೆಯಲ್ಲಿ ನುಸುಳಿದೆ.

ಆಕೃತಿಯು ನನ್ನ ಕಡೆಗೆ ಲಕ್ಷ್ಯವಿಲ್ಲದೆ ಮಹಾದ್ವಾರದ ಕಡೆಗೇ ಹೋಯಿತು. ಅದರ ತಲೆಯ ಮೇಲೆ ಎರಡು ಕೋಡು; ಭುಜಕ್ಕೆ ಬೀಸಾದ ರೆಕ್ಕೆ; ಕಪ್ಪು ಮೈಬಣ್ಣ; ಮೊಳಕಾಲವರೆಗೂ ಚಾಚಿದ ಕಪ್ಪು ತಲೆ-ಗೂದಲು; ಕೊರಳಲ್ಲಿ ಗುಲಾಬಿಹೂವಿನಮಾಲೆ; ಮುಖಭಾವ ಶಾಂತ, ಗಂಭೀರ.

ಹೆಗಲಮೇಲೆ ಕುರಿಯೊಂದು ಜೋತುಬಿದ್ದಿತ್ತು.

ಮಹಾದ್ವಾರದ ತೀರ ಹತ್ತಿರ ಹೋಗಿ 'ಹಾ–ಹೀ–ಹೇ' ಎಂದು ಅಮಾನುಷಧ್ವನಿಯಿಂದ ಕೂಗಿತು ಆಕೃತಿ.

ಬರ್ಜಿಗಳು ಹಿಂದಕ್ಕೆ ಸರಿದವು. ಕಬ್ಬಿಣಬಾಗಿಲು ತೆರೆಯಿತು.

ಒಳಗೂ ಮಂದ ಕೆಂಪು ಪ್ರಕಾಶವು ತುಂಬಿತ್ತು.

ಇನ್ನೊಂದು ಆಕೃತಿಯು ಒಳಗಿನಿಂದ ಬಂದು ಬಾಗಿಲಿಗೆ ನಿಂತಿತು.

ಹೊರಗಿನ ಆಕೃತಿಯು ಒಳಗಿನ ಆಕೃತಿಯನ್ನು ತಬ್ಬಿಕೊಂಡು ಒಳಗೆ ಹೋಯಿತು.

ಇಬ್ಬರೂ ಒಂದೊಂದು ಕಲ್ಲಿನ ಆಸನದ ಮೇಲೆ ಕುಳಿತುಕೊಂಡರು. ಮಧ್ಯದಲ್ಲಿ ಕುರಿ ಬಿದ್ದಿತ್ತು.

ಮಾತಿಗೆ ಪ್ರಾರಂಭವಾಯಿತು.

**ಆಕೆ:—** ( ರಕ್ತವನ್ನು ಮಣ್ಣಿನ ಮಡಿಕೆಯಿಂದ ಕುಡಿಯುತ್ತ ) ಅದೆಷ್ಟು ದಿನವೆಂದು ಈ ಹಾಳು ಪಶುರಕ್ತವನ್ನು ಕುಡಿಯಬೇಕು ? ಈ ನೆಲ, ನೀರ ಹೊಟ್ಟೆಯೊಳಗಿಂದ ಹೊರಗೆ ಬಂದಾಗಿನಿಂದಲೂ ಇದನ್ನೇ ಕುಡಿದೂ

ಕುಡಿದೂ ಬೇಸರ ಬಂತು. ಹೊಸ ರಕ್ತ ಬೇಕು ನನಗೆ.

**ಈತ :**— ಹೆಃ ಹೆಃ ಹೆಃ ! ತುಸು ತಡೆ. ಹೊಸರಕ್ತವನ್ನೇ ತರುತ್ತೇನೆ. ನಮ್ಮ ಈ ಬೇಸರ ಹೋಗುವಂತೆ ಒಂದು ಹೊಸ ಜಾಗ ಹುಡುಕಿದ್ದೇನೆ.

**ಆಕೆ :**— ಎಲ್ಲಿ ?

**ಈತ :**— ಇಲ್ಲಿಯೆ, ಈ ನಮ್ಮ ಪರ್ವತದಾಚೆ, ಕಡಲಿಗೆ ಸಮೀಪದಲ್ಲಿ ಒಂದು ಹೊಸಬಗೆಯ ತೋಟವನ್ನು ಕಂಡೆ. ಎಷ್ಟು ಸುಂದರವಾಗಿದೆ ! ಎಂಥಾ ಚಮತ್ಕಾರ ! ಅಲ್ಲಿಯ ಗಿಡಗಳು ನಡೆದಾಡುತ್ತವೆ ! ಅವು ಬೊಡ್ಡೆ ಯೊಳಗಿಂದ ಹಣ್ಣು ಬಿಡುತ್ತವೆ ! ಅಲ್ಲಿಯ ಹಣ್ಣು, ಕಾಯಿ, ಮಿಡಿ ಎಲ್ಲಕ್ಕೂ ಒಂದೊಂದು ರುಚಿಯೆ ಬೇರೆ. ಒಮ್ಮೆ ರುಚಿ ನೋಡಿದರೆ ಸಾಕು, ನಮ್ಮ ನಾಲಿಗೆಯ ರುಚಿಯೆ ಬದಲಾದೀತು.

**ಆಕೆ :**— ಯಾರೂ ಕಾಯುತ್ತಿರುವದಿಲ್ಲೇನು ?

**ಈತ :**— '**ಕಾಲ**' ಕಾಯುತ್ತಿದ್ದನಂತೆ. ಮೊನ್ನೆ ಮೊನ್ನೆ ಒಂದು ಪಾಪದ ಮಳೆಯಾಯಿತಂತೆ. ಅದರಿಂದ ಅಲ್ಲಿಯ ಎಲ್ಲ ಗಿಡಬಳ್ಳಿಗಳಲ್ಲಿಯ ಹೂ, ಮಿಡಿ, ಕಾಯಿ, ಹಣ್ಣುಗಳಿಗೂ ಒಳಗೇ ಹುಳಹತ್ತುವ ಭಯವಿದೆ ಯಂತೆ. ಅದನ್ನು ತಪ್ಪಿಸಬೇಕಾದರೆ ಸುಗ್ಗಿಗೆ ಮೊದಲು ದಿವ್ಯಾಗ್ನಿಯ ಕಾವು ಕೊಡಬೇಕಂತೆ ಅವಕ್ಕೆಲ್ಲ. ಅದನ್ನು ತರಲು ಹೋಗಿದ್ದಾನೆ. ಇದೇ ನಮಗೆ ಅನುಕೂಲ ಸಮಯ. ಕಾಯುವ ಕೈ ಇಲ್ಲದ್ದನ್ನು ನೋಡಿಯೆ ನಮ್ಮ ಕೊಯ್ಯುವ ಕೈ ಚಾಚಿ ಸುಗ್ಗಿಯನ್ನು ನಾವೇ ಪ್ರಾರಂಭಿಸಿದರಾಯಿತು.

**ಆಕೆ :**— ಆಗಲೇ ಹುಳ ಹತ್ತಿಬಿಟ್ಟಿದ್ದರೆ ?

**ಈತ :**— ಛೆ ! ಇನ್ನೂ ಹತ್ತಿಲ್ಲ. ಅಲ್ಲಿಯ ಗಿಡಬಳ್ಳಿಗಳು ಏನು ತುಂಬಿಕೊಂಡು ಬೆಳೆದುನಿಂತಿವೆ ! ಎಂತೆಂತಹ ಸವಿಸವಿ ಹಣ್ಣು ಬಿಟ್ಟವೆ ! ಅದೇಕೆ, ಅಲ್ಲಿಯೆ ಎಳೆ ಹುಲ್ಲ ಮೇಲೆ ಹಣ್ಣಾಗಿ ಉದುರಿ ಬಿದ್ದ ಫಲಗಳನ್ನೂ ಒಮ್ಮೆ ರುಚಿ ನೋಡುವ ಹಾಗಿವೆ. ಬಾಡಿಬಿದ್ದ ಹೂಗಳಿಗೂ ಒಂದು ರುಚಿ ಇದೆ. (ಮಧ್ಯದಲ್ಲಿ ಬಿದ್ದಿದ್ದ ಕುರಿಯ ಕಡೆಗೆ ತೋರಿಸಿ) ಈ ರಕ್ತ ಕುಡಿದ ಈ ನಾಲಿ ಗೆಗೆ ಆ ರಕ್ತ ಎಷ್ಟು ಸವಿ ಹತ್ತಬಹುದು !

**ಆಕೆ :**— '**ಕಾಲ**' ಬಂದುಬಿಟ್ಟರೆ ಹೇಗೆ ?

**ಈತ :**— ಇಷ್ಟು ಬೇಗ ಎಲ್ಲಿ ಬರುತ್ತಾನೆ ? ಕಾಲ ಬಂದಾಗಲೆ

ಬರುತ್ತಾನೆ. ಅಲ್ಲಿಯವರೆಗೆ ನಮ್ಮದೇ ಸುಗ್ಗಿ.

**ಆಕೆ:**— ಅದು ನಮಗೆ ಕೆಡಕು ತರಲಿಕ್ಕಿಲ್ಲವಷ್ಟೆ? ಯಾಕೊ ನನಗೆ ಭಯ ಬಂತೆಂದು ಹಾಗೆ ಕೇಳಿದೆ. ಆ ಸಾಹಸ ತರವಲ್ಲ ಎನಿಸುತ್ತಿದೆ. ತಪ್ಪಿ ಆ ಕಾಲನ ಕೈಗೆ ಸಿಕ್ಕರೆ ಮುಗಿದೇಹೋಯಿತು.

**ಈತ:**— ಇಲ್ಲದ ಭಯ ನಿನ್ನದು. ಕಾಲ ಬಂದರೂ ಹೆದರಿಕೆ ಇಲ್ಲ. ಒಮ್ಮೆ ರುಚಿ ನೋಡು, ಆಮೇಲೆ ನೀನೇ ಬಿಡುವುದಿಲ್ಲ. ನಡೆ, ನಮ್ಮ ನಿತ್ಯದ ನೃತ್ಯ ಪ್ರಾರಂಭಿಸೋಣ.

ಇಬ್ಬರೂ ಎದ್ದು ಕೈಗೆ ಕೈಹಿಡಿದು ಯಾವುದೋ ಒಂದು ಹಾಡು ಹೇಳುತ್ತ ಕಾಡುಕುಣಿತವನ್ನು ಪ್ರಾರಂಭಿಸಿದರು.

ಕಬ್ಬಿಣದ ಬಾಗಿಲು ಮುಚ್ಚಿತು. ಬರ್ಚಿಗಳು ಸರಿದುಬಂದವು.

ಮರುದಿನ ಸಂಜೆ.

'ಈತ' ಬಂದ. 'ಹಾ-ಹೀ-ಹೇ' ಎಂದು ಕೂಗಿದ. ಬಾಗಿಲು ತೆರೆಯಿತು. 'ಆಕೆ' ಬಂದು ಒಳಗೆ ಕರೆದುಕೊಂಡು ಹೋದಳು. ಇಬ್ಬರೂ ತಮ್ಮ ತಮ್ಮ ಆಸನಗಳ ಮೇಲೆ ಕುಳಿತರು.

ಮಧ್ಯದಲ್ಲಿ ತೀರ ಒಣಗಿಹೋದ ಮುದುಕನ ಹೆಣವೊಂದು ಬಿದ್ದಿತ್ತು.

**ಆಕೆ:**— (ಹೆಣವನ್ನು ಹಿಚುಹಿಚುಕಿ ನೋಡಿ) ಹಾಂ! ಹೇಗಿದೆ?

**ಈತ:**— ತಿಂದು ನೋಡು.

(ಇಬ್ಬರೂ ಅದನ್ನು ತಿನ್ನಲು ಪ್ರಾರಂಭಿಸಿದರು.)

**ಈತ:**— ಹೇಗಿದೆ ರುಚಿ?

**ಆಕೆ:**— ಸಪ್ಪಗಿದೆ. ರಸವೂ ಕಡಿಮೆ. ಬಿದ್ದು ಒಣಗಿದ್ದಿರಬೇಕು?

**ಈತ:**— ಅದೇನೇ ಇರಲಿ, ರುಚಿ ಹೊಸದಿಲ್ಲವೇ?

**ಆಕೆ:**— ಹೌದು. 'ಆತ' ಬಂದಿದ್ದನೇನು ಮತ್ತೆ?

**ಈತ:**— ಹುಂ. ಬಂದುಬಿಟ್ಟದ್ದ! ಯಾರೂ ನೋಡುವವರಿಲ್ಲೆಂದು ಹರಾಹುರಿಯಿಂದ ತೋಟದಲ್ಲೆಲ್ಲ ಗಿಡಗಿಡಕ್ಕೂ ಹೋಗಿ ಆ ಫಲಭಾರವನ್ನು ಬಾಯಿಬಿಟ್ಟು ನೋಡುತ್ತಿದ್ದೆ. ಆ ಹೊಳಪುಳ್ಳ ಹಣ್ಣುಗಳನ್ನು ನೋಡಿ

ದಂತೆಲ್ಲ ಅವನ್ನು ಪಡೆಯಬೇಕೆಂಬಾಸೆ ಬಲಿಯುತ್ತ ಬಂತು. ಒಂದರಕಿಂತ ಒಂದು ಹಣ್ಣು ಹೆಚ್ಚು ಮೋಹಕವಾಗಿದ್ದವು. ಹಾಗೇ ತಿರುಗಾಡುತ್ತ ಒಂದು ಭವ್ಯಗಿಡದ ಬುಡಕ್ಕೆ ಬಂದೆ. ನಕ್ಷತ್ರಗಳ ಗೊಂಚಲದಂತೆ ಹೊಳೆಯುವ ಹಣ್ಣಿನ ಒಂದು ಗೊಂಚಲನ್ನು ನೋಡಿ ಮನವು 'ಆಹಾ!' ಎಂದು ಬಾಯಿ ಬಿಟ್ಟಿತು. ನಿನ್ನ ನೆನಪಾಯಿತು. ನಿನಗಾಗಿ ಅದನ್ನು ಕೊಯ್ದು ತರಬೇಕೆಂದು ಆತುರ ಹೆಚ್ಚಿತು. ಅದರಿಂದ ನೀನು ಪಡೆಯಬಹುದಾದ ಸುಖಾನಂದವನ್ನು ನೆನೆದು ಕೈಗಳು ಮೆಲ್ಲಗೆ ಮುಂದಾದವು. ಇನ್ನು ಆ ಗೊಂಚಲನ್ನು ಹಿಡಿಯುತ್ತಿದ್ದೆ; ಅಷ್ಟರಲ್ಲಿ ನನ್ನ ಹಿಂದಿನಿಂದ ಯಾರೊ 'ತಡೆ' ಎಂದು ಕೂಗಿದರು. ಎತ್ತಿದ ಕೈ ಕೆಳಗೆ ಬಂತು. ಗಾಬರಿಯಿಂದ ಹಿಂತಿರುಗಿ ನೋಡಿದೆ, ಅವನೇ ಆ ಕಾಲಪುರುಷ—ನಗುತ್ತ ನಿಂತಿದ್ದ! ನನ್ನ ಹಿಂದೆಯೆ ನನಗೆ ತಿಳಿಯದ ಹಾಗೆ ಅದು ಹೇಗೆ ಬಂದಿದ್ದನೋ ಗೊತ್ತಾಗಲಿಲ್ಲ. ಅವನನ್ನು ನೋಡಿ ನನ್ನ ಶಕ್ತಿಯೆಲ್ಲ ಹೀರಿಹೋದಂತಾಗಿ ಕುಸಿಯುವುದರಲ್ಲೇ ಇದ್ದೆ....

**ಆಕೆ :—** ಬಂದು ಬಿಟ್ಟಿದ್ದನೇ ?

**ಈತ :—** ಹೌದು. ಬಂದು ಕುಸಿಯುತ್ತಿದ್ದ ನನ್ನನ್ನು ಅವನೇ ಎತ್ತಿ ಹಿಡಿದ. ಮತ್ತೇನನ್ನು ಅನ್ನದೆ, ಅಲ್ಲಿಯೆ ಹುಲ್ಲಮೇಲೆ ಉದುರಿ ಬಿದ್ದ ಹಣ್ಣುಗಳನ್ನು ಒಯ್ಯಬಹುದೆಂದ. ಮೈಗೆ ಆ ರಸ ಹಿತವೆಂದೂ ಹೇಳಿದ. "ಆದರೆ ಗಿಡದಲ್ಲಿದ್ದ ಕಾಯಿಗಳಿಗೆ ಮಾತ್ರ ಹಾಗೆ ಕೈಹಾಕಬೇಡ; ಅವೆಲ್ಲವೂ ಇನ್ನೂ ಹಣ್ಣಾಗಬೇಕು. ಉದುರಿ ಬೀಳಬೇಕು. ಅಂದರೆ ಗಿಡ ಬಾಳೀತು. ಅದನ್ನು ಬಿಟ್ಟು ಹಾಗೆ ಕೈಹಾಕಿ ಚಿವುಟಿದರೆ ಬೇರಿಗೇ ನಂಜಾಗಿ ಗಿಡವೇ ಒಣಗಿ ಹೋಗುತ್ತದೆ. ಈಗಂತೂ ಸಂಜಿನ ಗಾಳಿಯೇ ಬೀಸಹತ್ತಿದೆ. ಅವಕ್ಕೆಲ್ಲಾ ಈಗ ಕಾವು ಕೊಡಬೇಕಾಗಿದೆ. ಮತ್ತೆ ನಾನು ಅಲ್ಲಿಗೆ ಹೋಗಬೇಕಾಗಿದೆ. ಜೋಕೆ! ಹೂಕಾಯಿಗಳಿಗೆ ಕೈ ಹಚ್ಚೀಯಾ! ಒಮ್ಮೆ ಉಗುರ ನಂಜಾದರೆ ತೀರಿತು, ಇಡೀ ತೋಟವೇ ಹಾಳಾಗುತ್ತದೆ," ಎಂದು ಬೆದರಿಸಿದ.

**ಆಕೆ :—** ಅಂತೇ ಈ ಉದುರಿದ ಒಣ ಹಣ್ಣು ತಂದಿದ್ದೀರಾ ?

**ಈತ :—** ಹೌದು. ಆದರೂ ಮತ್ತೆ ಹೋಗಿ ಗಿಡದಲ್ಲಿಯ ಹಣ್ಣು ತರದೆ ಬಿಡುವುದಿಲ್ಲ.

**ಆಕೆ :—** ಹೇಗೆ ತರುವಿರಿ ? 'ಆತ' ಬೇರೆ ಇರುತ್ತಾನಲ್ಲ ?

**ಈತ:**— ಇಲ್ಲ. ಮತ್ತೆ ಹೋಗಿದ್ದಾನೆ. ಮುಂಜಾನೆ ಹೋಗುತ್ತೇನೆ.

**ಆಕೆ :**— ಆದರೆ....

**ಈತ :**— ಏನು ?

**ಆಕೆ :**— ಹಾಗೆ....ದುಡುಕಿದರೆ....ಹೇಗೆ ?

**ಈತ:**— ಏನಾಗುತ್ತದೆ ? ಏನೂ ಆಗುವುದಿಲ್ಲ, ತೋಟ ಹಾಳಾದರೂ ಮತ್ತೆ ಮಳೆ ಬಂದು ಚಿಗಿತೇ ಚಿಗಿಯುತ್ತದೆ.

**ಆಕೆ :**— ಯಾಕೊ ಭಯ ಬರಹತ್ತಿದೆ.

**ಈತ :**— ಎಷ್ಟಂದರೂ ಹೆಣ್ಣು ನೀನು. ಸಾಹಸದ ಹಣ್ಣು ಭಯ-ಭೀತರ ಬಾಯಿಗೆ ತುತ್ತಲ್ಲ. ಅದು ನಿರ್ಭೀತರ ಸೊತ್ತು. ಏನು ಬಂದದ್ದಕ್ಕೂ ಎದೆಗೊಟ್ಟು ನಿಲ್ಲಬೇಕು, ನಡೆ.

**ಆಕೆ :**— ಮುಂಜಾನೆ ಹೋಗಿ ಸಾಯಂಕಾಲ ತಿರುಗಿ ಬರುವಿರಲ್ಲವೆ ?

**ಈತ :**— ಓಹೊ, ನಡೆ, ಕುಣಿಯೋಣು ಬಾ.

(ಇಬ್ಬರೂ ಕೈಗೆ ಕೈ ಹಿಡಿದು ಕುಣಿತ ಪ್ರಾರಂಭಿಸಿದರು.)

ಕಬ್ಬಿಣದ ಬಾಗಿಲು ಮುಚ್ಚಿತು.

ಆದರ ಮರುದಿನದ ಸಂಜೆ.

' ಈತ ' ಬಂದ. ಹೆಗಲ ಮೇಲೆ ಎರಡು ಹೆಣಗಳನ್ನು ತಂದಿದ್ದ. ಒಂದು ಒಬ್ಬ ತರುಣಿಯದು. ಇನ್ನೊಂದು ಒಬ್ಬ ತರುಣನದು. ಮತ್ತನಾಗಿ ಕುಣಿಯುತ್ತ ಬಂದು ಉಚ್ಚಸ್ವರದಲ್ಲಿ ' ಹಾ-ಹೀ-ಹೇ ' ಎಂದು ಕೂಗಿದನು. ಬಾಗಿಲು ತೆರೆಯಿತು. ' ಆಕೆ ' ಬಂದು ಕೈಹಿಡಿದು ಒಳಗೆ ಕರೆದುಕೊಂಡು ಹೋದಳು.

ಹೆಗಲ ಮೇಲಿನ ಹೆಣಗಳನ್ನು ಕೆಳಗೆಸೆದು ಉನ್ಮತ್ತನಾಗಿ ಕುಣಿಯ ಹತ್ತಿದನು.

**ಈತ :**— ( ಕುಣಿಯುತ್ತ ) ಇಕಾ ನೋಡು, ಇದು ಸಾಹಸದ ಹಣ್ಣು. ಗಿಡದಿಂದ ಚಿವುಟಿಯೇ ತಂದಿದ್ದೇನೆ. ಏನಾಗುತ್ತದೆ ಆಗಲಿ !

**ಆಕೆ :**— ( ತಂದ ಆ ಫಲಗಳನ್ನು ನೋಡುತ್ತ ) ಆಹಾ ! ಎರಡೂ ಒಂದೇ

ಗಿಡದ ಹಣ್ಣೋ ?

**ಈತ :—** ಅಲ್ಲ, ಅಕೊ ಅದು, ಆಚೆಗೆ ಬಿದ್ದದ್ದು, ಮೆತ್ತಗಿನ ತೊಗಟೆಯದು—ಬಹಳ ಅಪರೂಪ. ಎಲ್ಲಿಯೂ ಸಿಗುವದಿಲ್ಲ. ಇನ್ನೊಂದೂ ಏನು ಕಡಿಮೆಯದಲ್ಲ; ರಸ ತುಂಬಿವೆ.

**ಆಕೆ :—** ಕುಳಿತುಕೊಳ್ಳಿರಿ. ಹಸಿವೆ ಮೊದಲು ಹಿಂಗಿಸೋಣ.

(ಇಬ್ಬರೂ ಎದುರುಬದಿರಾಗಿ ಕುಳಿತುಕೊಂಡರು.)

**ಈತ :—** ಏನು ಸವಿ ! ಏನು ರುಚಿ ! ಏನು ರಸ !

**ಆಕೆ:—** ( ಒಂದೊಂದೆ ಅವಯುವಗಳನ್ನು ಕಿತ್ತಿ ತಿನ್ನುತ್ತಿರುವಾಗ ರಕ್ತವು ಚಿಮ್ಮುತ್ತಿರುವುದನ್ನು ಕಂಡು ) ಎಷ್ಟು ರಸ ! ಚಿಮ್ಮಿ ಹೊರಗೆ ಬರುವಾಗ ಹಾಡಿದಂತೆ ಕೇಳಿಸುವುದಿಲ್ಲವೆ? ಈ ಮಾಂಸದ ಪಿಂಡ ನೋಡಿರಿ, ಎಷ್ಟು ಹಗುರಾಗಿದೆ ! ಬಾಯಲ್ಲಿ ಹಾಕಿದ ಕೂಡಲೆ ಕರಗಿ ಹೋಗುತ್ತದೆ !

**ಈತ :—** ನೀನು ಹೀಗೆ ಅನ್ನಬಹುದೆಂದು ಮೊದಲೇ ಊಹಿಸಿದ್ದೆ.

**ಆಕೆ :—** ಹಂ !

**ಈತ :—** ಇನ್ನೂ ಇದನ್ನೇನು ಮಾಡೀ, ನಾಳೆ ನೋಡು. ಹೊಸ ಹೂ, ಹೊಸ ಮೊಗ್ಗುಗಳನ್ನು ತರುತ್ತೇನೆ. ಅವುಗಳ ರುಚಿ ನೋಡಿದರಂತೂ ನೀನು ಎಚ್ಚರವನ್ನೆ ಕಳೆದುಕೊಳ್ಳಬಹುದು.

**ಈತ :—** ' ಆತ ' ಇರಲಿಲ್ಲವೆ ಮತ್ತೆ ?

**ಈತ :—** ಇರಲಿಲ್ಲ. ಇಷ್ಟೆ ಅಲ್ಲ, ಹೊಸದೊಂದು ಸುದ್ದಿ ತಂದಿದ್ದೇನೆ. ಸಂತೋಷದ ಸುದ್ದಿ ! ಆತನೀಗ ತೊಡಕಿನಲ್ಲಿ ಸಿಕ್ಕಿದ್ದಾನಂತೆ. ಅವರವರಲ್ಲಿಯೇ ಒಂದು ದೊಡ್ಡ ಹೋಲಿಯೆದ್ದಿದೆಯಂತೆ. ಅರ್ಧಕ್ಕಿಂತ ಹೆಚ್ಚಿಗೆ ಜನ ತಿರುಗಿ ಹೂಡಿದ್ದಾರಂತೆ. ಕ್ರಾಂತಿಯೆ ನಡೆದಿದೆಯಂತೆ. ಆ ಪಂಗಡದ ಹಿರಿಯಾಳು ಈ ಸಮಯ ಸಾಧಿಸಿ ತನ್ನ ಯಜಮಾನನನ್ನೆ ಉರುಳಿಸಿ ತಾನೇ ಮೇಲಾಗಬೇಕೆಂದು ಹೊಂಚು ಹಾಕಿದ್ದಾನಂತೆ. ಅಂತೂ ಖಾಡಾಖಾಡಿ ಯುದ್ಧ ನಡೆಯಬಹುದು. ಇಂತಹದರಲ್ಲಿ ಈ ತೋಟವನ್ನು ಕಾಯುವವರಾರು ? ನೋಡುವವರಾರು ? ಅದೀಗ ನಮ್ಮದೆ ಆಗಿದೆ.

**ಆಕೆ :—** ಆದರೂ ನೀವು ಇನ್ನೂ ಎಚ್ಚರದಿಂದಿರಬೇಕು ಎನ್ನಿಸುತ್ತಿದೆ. ಮೈತುಂಬ ಕಣ್ಣಿಟ್ಟುಕೊಂಡು ನಡೆಯಬೇಕು.

**ಈತ** :— ಅದರ ಚಿಂತೆ ಬಿಡು. ಎಲ್ಲ ಕೆಲಸ ಮುಗಿಸಿಬಿಟ್ಟದ್ದೇನೆ. ಈ ಹೊತ್ತಿನ ನಮ್ಮ ಕುಣಿತಕ್ಕೆ ಒಂದು ಹೊಸ ಹಾಡು ತಂದಿದ್ದೇನೆ. ಕೇಳು.

"ಹೈ ಧಿಂ ಧಿಂ ಧೀ ಧೀ ಧೀ
ಹತ್ತಿತು ಬೇಗೆ, ಹುಟ್ಟಿತು ವ್ಯಾಜ್ಯ ;
ನಾನೆ ಅರಸು, ನನ್ನದೆ ರಾಜ್ಯ.
ಹೊ ಧಿಂ ಧಿಂ ಧಿಂ ಧೀ ಧೀ ಧೀ."

ಇಬ್ಬರೂ ಕೈಗೆ ಕೈ ಹಿಡಿದು ಕುಣಿಯಲಾರಂಭಿಸಿದರು.

ಕಬ್ಬಿಣದ ಬಾಗಿಲು ಮುಚ್ಚಿತು.

ಅದರ ಮರುದಿನದ ಸಂಜೆ.

'ಈತ' ಬಂದ. ಎರಡು ಹಸುಗೂಸುಗಳನ್ನು ಹೆಗಲ ಮೇಲೆ ಹೊತ್ತು ತಂದಿದ್ದಾನೆ. ಬಾಗಿಲ ಎದುರಿಗೆ ಬಂದು 'ಹಾ-ಹೀ-ಹೇ' ಎಂದು ಕೂಗಿದ.

ಕಬ್ಬಿಣದ ಬಾಗಿಲು ತೆರೆಯಲಿಲ್ಲ. ಮತ್ತೆ ಕೂಗಿದ. ಇನ್ನೂ ತೆರೆಯಲಿಲ್ಲ. ಸಿಟ್ಟು ತುಂಬಿ ಇನ್ನೂ ಒದರಿದ. ಬಾಗಿಲು ಹಾಗೇ ಇತ್ತು.

"ಏನಾಗಿದೆ ಈಕೆಗೆ? ಬಾಗಿಲು ಏಕೆ ತೆರೆಯಲೊಲ್ಲದು? ನಿನ್ನೆಯ ಹೊಸರಕ್ತ ಕುಡಿದು ಎಚ್ಚರ ಕಳೆದುಕೊಂಡಿರಬಹುದೇ? ಏನು, ಇನ್ನೂ ಮಲಗಿಯೆ ಇರಬಹುದೇ? ಇನ್ನೊಮ್ಮೆ ಕೂಗಿ ನೋಡೋಣ." ಎಂದು ಈತ ಇನ್ನೂ ಎತ್ತರದ ದನಿಯಲ್ಲಿ ಕೂಗಿದ.

ಬಾಗಿಲು ಮುಚ್ಚಿದ್ದು ಈಗಲೂ ತೆರೆಯಲಿಲ್ಲ. 'ಈತ'ನ ಸೈರಣೆ ಮೀರಿತು. ಹೆಗಲಮೇಲಿನ ಕೂಸುಗಳನ್ನು ಬಾಗಿಲಿಗೆ ಅಪ್ಪಳಿಸಿ, ಬಾಗಿಲು ಮುರಿದು ಒಳಕ್ಕೆ ಹೋದನು.

ಅತ್ತಿತ್ತ ನೋಡಿದನು. ಒಂದು ಮೂಲೆಯಲ್ಲಿ 'ಆಕೆ' ಅಸ್ತವ್ಯಸ್ತವಾಗಿ ಬಿದ್ದುಕೊಂಡಿದ್ದಳು. ಎಚ್ಚರ ಹೋಗಿತ್ತು. ಅವಳ ಹತ್ತಿರ ಹೋಗಿ, ಅವಳ ಮೈತಟ್ಟಿ 'ಏಳು, ಏಳು. ಇದು ನೋಡು! ಎಂತಹ ಮೊಗ್ಗುಗಳನ್ನು ತಂದಿದ್ದೇನೆ! ನಿನ್ನ ಸಲುವಾಗಿ ಈ ಜೀವ ಪಣಕ್ಕೆ ಹಚ್ಚಿ ತಂದಿದ್ದೇನೆ. ಏಳು, ನೋಡಿಯಾದರೂ ನೋಡು.' ಎಂದು 'ಈತ' ಎಷ್ಟು ಹೇಳಿದರೂ 'ಆಕೆ' ಮಿಸುಕದೆ ಹಾಗೇ ಮಲಗಿದ್ದಳು.

ಅಷ್ಟೊತ್ತಿಗೆ ಹೊರಗೆ ಯಾರೋ ಸುಳಿದಾಡುತ್ತಿರುವಂತೆ ಕಂಡಿತು. 'ಈತ' ಒಮ್ಮೆಲೆ ಎದ್ದು ಬಂದು "ಹೊ! ಯಾರವರು? ಇಲ್ಲಿ ಸುಳಿದಾಡುವವರು?" ಎಂದು ಹೊರಗೆ ಬಂದು ನಿಂತು ನೋಡಿದ. 'ಆತ' ಬಂದಿದ್ದ. ಆತನ ಹಿಂದೆ ಜನವೂ ಬಂದಿತ್ತು.

ನೋಡಿ 'ಈತ'ನ ಮುಖ ನಿಸ್ತೇಜವಾಯಿತು. ಶಕ್ತಿಯೆಲ್ಲ ಉಡುಗಿ ಹೋಯಿತು. ಮಲಗಿದ್ದ 'ಆಕೆ'ಯ ಕಡೆಗೊಮ್ಮೆ, ನಗುತ್ತ ನಿಂತಿದ್ದ 'ಆತನ' ಕಡೆಗೊಮ್ಮೆ ದಿಂಗ್ಮೂಢನಾಗಿ ನೋಡುತ್ತ ನಿಂತನು.

ಬಂದ ಜನ 'ಹಿಡಿಯಿರಿ, ಇವನನ್ನು! ನಮ್ಮನ್ನು ಹಾಳುಮಾಡಿದ್ದಾನೆ! ನಮ್ಮ ಜೀವನದ ಬೇರಿಗೇ ನಂಜು ತಾಕಿಸಿದ್ದಾನೆ! ನಮ್ಮ ಜೀವನವೃಕ್ಷಗಳನ್ನೆಲ್ಲಾ ಹಾಳುಮಾಡಿದ್ದಾನೆ! ಬಂಜೆಮಾಡಿದ್ದಾನೆ!' ಎಂದು ಕೂಗಾಡಹತ್ತಿತು.

'ಆತ' ನಿಶ್ಚಲವಾದ ಶಂಖಧ್ವನಿಯಂತಿದ್ದ ತನ್ನ ಧ್ವನಿಯಲ್ಲಿ 'ಅವನನ್ನು ಹಿಡಿಯಿರಿ! ತೋಟ ಹಾಳುಮಾಡಿದ್ದಾನೆ! ದಿವ್ಯಾಗ್ನಿಗೆ ಬಲಿ ಕೊಡೋಣ. ಅಂದರೆ ಹೊಸ ಜೀವಮಳೆಯಾಗಿ ಹಾಳಾದ ತೋಟ ಮತ್ತೆ ಚಿಗಿಯುತ್ತದೆ.' ಎಂದು ತನ್ನ ಜನರನ್ನು ಕುರಿತು ಹೇಳಿದ.

ಬಂದ ಜನವೆಲ್ಲ ಒಳಕ್ಕೆ ನುಗ್ಗಿತು.

'ಈತ' ಗಾಬರಿಯಾಗಿ ಹೌಹಾರಿ ನಿಂತ. ತನಗೆ ಗಿಡ, ಬಳ್ಳಿ, ಹೂ, ಕಾಯಿ, ಹಣ್ಣುಗಳಂತೆ ಆ ತೋಟದಲ್ಲಿ ಕಂಡಿದ್ದೆಲ್ಲವೂ ಈಗ ಮಾನವರೂಪ ತಳೆದು ಬಂದಂತೆ ತೋರಿತು, ಅವನಿಗೆ. ಕಣ್ಣು ಮುಚ್ಚಿದ. ಮುಚ್ಚಿದಾಗಲೆ ಜನ ಬಂದು ಹಿಡಿದುಕೊಂಡು ಹೋಯಿತು. (೧೬-೯-೧೯೩೧)

ಜೀವಕ್ಕೆ ಅಯ್ಯೊ ಎನಿಸಿ ಅಲ್ಲಿಂದ ಮುಂದೆ ಸಾಗಿದೆ. ಅದೇ ಕಾಲು-ದಾರಿಯನ್ನು ಹಿಡಿದು ನಡೆದೆ. ಆ ಅರಣ್ಯವನ್ನು ದಾಟಿ, ಪರ್ವತವನ್ನು ಹತ್ತಿ ತುದಿ ಮುಟ್ಟಿದೆ.

ಪರ್ವತ ಶಿಖರದ ಮೇಲೆ ನಿಂತು ಆಚೆಗೆ ನೋಡಿದೆ. ದೂರದ ವರೆಗೂ ವಿಸ್ತಾರವಾದ ಬೈಲು ಹರವಿಕೊಂಡಿತ್ತು. ನದಿಯೊಂದು ಹಾವಿನಂತೆ

ಡೊಂಕುಡೊಂಕಾಗಿ ಹರಿದು ದೂರ ಕ್ಷಿತಿಜದಲ್ಲಿ ಕಣ್ಮರೆಯಾಗಿತ್ತು. ನದಿಯ ನೀರು ಚಂದ್ರಪ್ರಕಾಶಕ್ಕೆ ಬೆಳ್ಳಿಯಂತೆ ಹೊಳೆಯುತ್ತಿತ್ತು. ಕಾಲ ಕೆಳಗೆ ಮೋಡಗಳು ಓಡಾಡುತ್ತಿದ್ದವು. ನಾನು ನಡೆದು ಬಂದ ಆ ಕಾಲುದಾರಿ ಪರ್ವತವನ್ನೆಲ್ಲ ಸುತ್ತಾಡಿ ಬಂದು ಆ ನದಿಯ ಕಡೆಗೇ ಹೊರಟಿತ್ತು. ಶಿಖರದಿಂದಿಳಿದು ಆ ಕಾಲುದಾರಿಯನ್ನು ಹಿಡಿದು ಹೊರಟೆ. ಅದು ಕೆಲಹೊತ್ತಿನ ನಂತರ ನನ್ನನ್ನು ನದಿಯ ದಂಡೆಗೆ ಒಯ್ದು ನಿಲ್ಲಿಸಿತು.

## ಸಿಡಿಲ್‌ನುಂಗಿದ ಮಾಮರ

ತುಂಬಿ ಸೂಸಿ ಹರಿಯುತ್ತಿತ್ತು ಹೊಳೆ. ಅದರ ದಂಡೆಯ ಮೇಲೆಯೆ ಒಂದು ದೊಡ್ಡ ಮಾವಿನ ಮರವಿತ್ತು. ಮರದ ಬಹುಭಾಗವೆಲ್ಲ ಹರಿಯುವ ಹೊಳೆಯ ನೀರ ಮೇಲೆಯೆ ಬಾಗಿತ್ತು. ಮರದ ತುಂಬೆಲ್ಲ ಗೊಂಚಲು ಗೊಂಚಲಾಗಿ ಕಾಯಿಗಳು ಸುರಿದಿದ್ದವು. ಆ ಫಲಭಾರಕ್ಕೇ ಮರವು ಬಾಗಿದಂತಿತ್ತು.

ಹುಣ್ಣಿಮೆಯ ಚಂದ್ರನು ಹೊಳೆಯ ಆಚೆಗಿನ ಗುಡ್ಡದಲ್ಲಿ ಇಳಿಯುವುದರಲ್ಲಿದ್ದನು. ಆ ಬೆಳಕು ತುಂಬಿ ಹರಿಯುತ್ತಿದ್ದ ನಿರ್ಮಲ ಜಲದ ಮೇಲೆ ಕುಣಿದಾಡುತ್ತಿತ್ತು.

ಸಿಂಹಗರ್ಜನೆಯೊಂದು ಗುಡ್ಡದೊಳಗಿಂದ ಸೀಳಿ ಬಂದು ಅಲ್ಲಿಯ ಆ ಪ್ರಶಾಂತ ಮೌನವನ್ನು ನಡುಗಿಸಿತು.

ಮಾವಿನ ಮರದಡಿಯಲ್ಲಿ ಕೆಲ ಜನರು ನಿಶ್ಚಲರಾಗಿ ತಮ್ಮ ತಮ್ಮಲ್ಲಿಯೆ ಹರಟುತ್ತಿದ್ದರು. ಸಿಂಹಗರ್ಜನೆ ಅವರನ್ನು ವಿಚಲಿತರನ್ನಾಗಿ ಮಾಡಲಿಲ್ಲ. ಅವರಲ್ಲಿ ಕೆಲರು ಮರದ ಮೇಲಿದ್ದರು; ಕೆಲರು ಹತ್ತುವದರಲ್ಲಿದ್ದರು; ಕೆಲರು ನಿರಾತಂಕವಾಗಿ ಅಲ್ಲಿಯ ಹುಲ್ಲುಗಾವಲ ಮೇಲೆ ಅಂಗಾತ ಬಿದ್ದುಕೊಂಡು ತಮ್ಮ ಶ್ರಮದಿಂದ ಹುಟ್ಟಿ ಬೆಳೆದು, ಫಲ ಬಿಟ್ಟ ಆ ಮಾವಿನ

ಮರದ ಫಲಭಾರವನ್ನು ತಲ್ಲೀನತೆಯಿಂದ—ಆದರೂ ಸ್ವಲ್ಪ ಬೆನ್ನು ಚಪ್ಪರಿಸಿ ಕೊಳ್ಳುವ ಭಾವದಿಂದ—ನಿರೀಕ್ಷಿಸಿ ಆನಂದ ಹೆಮ್ಮೆಪಡುತ್ತಿದ್ದರು. ಇನ್ನು ಕೆಲರು ಸಂಸಾರದ ಯಾವ ದುಃಖಕ್ಕೂ ಸಿಕ್ಕದ ಮರಗೂಳಿಗಳಂತೆ ಒಂದು ಜಾತಿಯ ಉನ್ಮತ್ತಭಾವನೆಯಲ್ಲಿ, ಅಪಸ್ವರದ ಕಡೆಗೂ ಲಕ್ಷ್ಯವಿಡದೆ ಹಾಡುತ್ತಿದ್ದರು, ಇಲ್ಲ, ಕಿರಿಚುತ್ತಿದ್ದರು.

ಆಗ ಮರದ ಮೇಲಿನವನೊಬ್ಬನೆಂದ: "ಇದೆಲ್ಲ ನಮ್ಮ ಫಲ!"

ಹುಲ್ಲುಗಾವಲ ಮೇಲೆ ಬಿದ್ದುಕೊಂಡು ನಿರೀಕ್ಷಿಸುತ್ತಿದ್ದವನೊಬ್ಬ ಅದಕ್ಕೆ ಉತ್ತರಕೊಟ್ಟ: "ಫಲ ನಮಗಲ್ಲ, ಬಳಲಿ ಬರುವ ಪಾಂಥನದು."

ಮರದ ಮೇಲಿನ ಇನ್ನೊಬ್ಬನೆಂದ: "ನಾವೇ ಹಚ್ಚಿಲ್ಲವೇ ಇದನ್ನು?"

ಹುಲ್ಲುಮೇಲಿನವನು ಎದ್ದು ಕುಳಿತು ಮುಖ ಮೇಲಕ್ಕೆ ಮಾಡಿ ಉತ್ತರ ಕೊಟ್ಟ: "ನಾವೇ ಹಚ್ಚಿದ್ದರೂ ನಮಗೇ ಎಂದಲ್ಲ."

ಮರದ ಮೇಲಿನ ಮೂರನೆಯವನೆಂದ: "ನಮಗೇ ಅಲ್ಲದಿದ್ದರೆ ಹಚ್ಚ ಬೇಕೇಕಿತ್ತು? ನಾನು ನೀರು ಹೊತ್ತು ತಂದು ಹಾಕಿದ್ದೆಲ್ಲ ವ್ಯರ್ಥವೇನು ಹಾಗಾದರೆ?"

ಹುಲ್ಲಮೇಲಿನವನು "'ನಾನು' ಬೇಡ; 'ನಾವು' ಇರಲಿ." ಎಂದು ಮತ್ತೆ ಹುಲ್ಲ ಮೇಲೆ ಬಿದ್ದುಕೊಂಡ. ಅವನ ಹತ್ತಿರವೆ ಇನ್ನೊಬ್ಬ ಮಲಗಿದ್ದ. ಅವರೆಲ್ಲರಲ್ಲಿ ಅವನೇ ಸ್ವಲ್ಪ ಹಿರಿಯ. ಆತನ ದೃಷ್ಟಿ ಭೂಮಿಯ ಗರ್ಭವನ್ನೂ ಭೇದಿಸಿ ನೋಡುವ ತೀವ್ರದೃಷ್ಟಿ. ಉಳಿದವರು ಹೀಗೆಲ್ಲ ಮಾತನಾಡುತ್ತಿದ್ದುದನ್ನು ಕೇಳಿ ಒಮ್ಮೆ ಮುಗುಳುನಗೆ ನಕ್ಕ. ಮರು ಕ್ಷಣವೇ ಮುಖ ಗಂಟಿಕ್ಕಿ ಉಸಿರ್ಗರೆದ. ಮುಖದ ಮೇಲೆ ನಿರಾಸೆಯ ಭಾವವು ಒಡಮೂಡಿತು. ತಾನು ಬಯಸಿದ ಫಲವು ಕೈಯಲ್ಲಿ ಬೀಳುವಷ್ಟ ರಲ್ಲಿಯೆ, ಅಹಂಕಾರದ ಬಿರುಗಾಳಿಗೆ ಹೊಳೆಯಲ್ಲಿ ಬಿದ್ದುಹೋದಂತೆನಿಸಿ, ಹೂಂಕರಿಸಿ ಹರಿಯುತ್ತಿದ್ದ ನೀರನ್ನೇ ಚಲಿಸದದೃಷ್ಟಿಯಿಂದ ನೋಡಹತ್ತಿದ.

ಅಷ್ಟರಲ್ಲಿ ಗಾಳಿ ಬೀಸಿತು. ನಿರಭ್ರವಾದ ಆಕಾಶದಲ್ಲಿ ತೇಲುತ್ತಿದ್ದ ತುಂಡುಮೋಡಗಳು ಕೂಡಿಕೊಂಡವು. ಗುಡ್ಡದ ತೀರ ಹತ್ತಿರ ಬಂದಿದ್ದ ಚಂದ್ರನು ಮೋಡಗಳಲ್ಲಿ ಮರೆಯಾದನು. ಅಲ್ಲಿಂದಲೇ ಮೋಡಗಳನ್ನು ದಬ್ಬಿಕೊಂಡು ಬರಹತ್ತಿತು ಗಾಳಿ.

ಗದ್ದರಿಸಿತು. ಗುಡುಗಿತು. ಮಿಂಚಿತು.

ತುಂಬಿದ ಮಾವಿನಮರವು ಆಮೂಲವಾಗಿ ಹೊಯ್ದಾಡಿತು. ಕಾಯ-ಗೊಂಚಲುಗಳು ಹಾರಿಬಿದ್ದವು. ಪ್ರವಾಹವು ಎಲ್ಲವನ್ನೂ ಶಾಂತವಾಗಿ ತನ್ನ ಮಡಿಲಲ್ಲಿಟ್ಟುಕೊಂಡು ಮುಂದೆ ಮುಂದೆ ಸಾಗಿತು.

'ಖಟ್ ಖಟ್ ಖಟ್ ಖಡಲ್' ಎಂದು ಸಿಡಿಲೊಮ್ಮೆ ಹೊಡೆಯಿತು. 'ಚಕ್' ಎಂದು ಮಿಂಚೊಂದು ಮಿಂಚಿತು. ಕತ್ತಲೆ ಕವಿಯಿತು. ಗಾಳಿಯೂ ಸ್ತಬ್ಧವಾಯಿತು. ಹನಿಯೊಡೆಯಿತು.

ಮರದಡಿಯಲ್ಲಿಯ ಜನರೆಲ್ಲ ಬಡ್ಡಿಗೆ ಆತುಕೊಂಡು ಗುಂಪಾಗಿ ನಿಂತರು. ಮಳೆ 'ಧೋ ಧೋ' ಎಂದು ಸುರಿಯಹತ್ತಿತು.

ನಾನೂ ಹೋಗಿ ಅವರಲ್ಲಿಯೆ ಸೇರಿದೆ. ಮತ್ತೊಮ್ಮೆ ಕೋಲ್ಮಿಂಚು ಹೊಡೆಯಿತು. ಅತ್ತ ನೋಡಿದೆ. ಆಗ ಒಂದು ಮಿಂಚು ಬಂದು ನಾವು ಆಶ್ರಯಿಸಿದ ಗಿಡವನ್ನೆ ಹೊಕ್ಕಿತು. ಸ್ವಲ್ಪ ಹೊತ್ತಾದ ಮೇಲೆ 'ಹಿಸ್ಸ್' ಎಂಬ ವಿಚಿತ್ರ ಧ್ವನಿಯು ಕೇಳಿಸಹತ್ತಿತು. ಕಿವಿಗಳನ್ನೆ ಕಣ್ಣು ಮಾಡಿ ಅತ್ತಿತ್ತ ನೋಡತೊಡಗಿದೆ. ನಾವು ಆಶ್ರಯಿಸಿದ ಮರದ ಟೊಂಗೆ ಟೊಂಗೆ ಗಳೊಳಗಿಂದ ನೀಲಿಯ ಜ್ವಾಲೆಯ ಎಸಳುಗಳು, ಹಾವಿನ ನಾಲಗೆಯಂತೆ ಹೊರಚಾಚುತ್ತ, ಅಧೋಮುಖಿಯಾಗಿ ಬಡ್ಡಿಯ ಕಡೆಗೇ ಬರುತ್ತಿರುವದನ್ನು ಕಂಡೆ. 'ನಾನು ಅರಸುತ್ತಿದ್ದ ದಿವ್ಯಾಗ್ನಿ ಇದೇ ಇರಬಹುದೇನು?' ಎಂದು ಕೊಂಡೆ. ಉಳಿದವರಿಗೂ ಅದು ಕಂಡಿರಬಹುದೆಂದು ನನ್ನ ಭಾವನೆ ಯಾಯಿತು. ಆದರೆ ಅವರೆಲ್ಲ ಸುಮ್ಮನೆ ನಿಂತಿದ್ದನ್ನು ನೋಡಿ, ಗಾಬರಿ ಯಲ್ಲಿಯೂ ಕುತೂಹಲ ಹೆಚ್ಚಾಗಿ, ಮಗ್ಗುಲಲ್ಲಿ ನಿಂತ ಒಬ್ಬನ ಮೈ ತಟ್ಟಿ, ಬೊಟ್ಟು ಮಾಡಿ, ಆ ಇಳಿದು ಬರುತ್ತಿದ್ದ ನೀಲಿಯ ಜ್ವಾಲೆಯನ್ನು ತೋರಿ ಸಿದೆ. ಅವನೂ ಗಾಬರಿಯಾದ. ಅಲ್ಲಿಂದ ಎಲ್ಲರೂ ಅತ್ತ ಕಡೆಗೇ ನೋಡ ಹತ್ತಿದರು. ಆ ಜ್ವಾಲೆಯು ಮಾಡುತ್ತಿದ್ದ ವಿಚಿತ್ರಸ್ವರವನ್ನು ಕೇಳಿ ಅವರೆಲ್ಲರೂ ದಂಗುಬಡಿದರು. ಏನು ಮಾಡಬೇಕೆಂಬುದು ಯಾರಿಗೂ ಗೊತ್ತಾಗಲಿಲ್ಲ.

ಅಷ್ಟೊತ್ತಿಗೆ ಯಾವುದೊ ಒಂದು ವ್ಯಕ್ತಿಯು ಕಂಬಳಿಯ ಮುಸುಕಿನಲ್ಲಿ ಅತ್ತ ಹಾಯ್ದುಹೋಗುತ್ತಿರುವದನ್ನು ನಾನು ಕಂಡೆ. ಕೇಳಿ ನೋಡ

ಬೇಕೆಂದು ಅವನನ್ನು ಕೂಗಿದೆ. ಅವನೂ ಬಂದ. ಉಳಿದವರೆಲ್ಲ ಅನಾಸ್ಥೆಯ ನಗೆ ನಕ್ಕರು.

"ಯಾಕ, ಏನ್ ಆಗ್ಯೆತಿ ?" ಎಂದು ಬಂದವನು ಕೇಳಿದ.

ಅವನಿಗೆ ಆ ಜ್ವಾಲೆಯನ್ನು ತೋರಿಸಿದೆ. ನೋಡಿದವನೆ ಕಂಬಳಿ ಕೊಡವಿ, ಕೈಯ್ಯ ಕೋಲ ಮೇಲೆ ಭಾರ ಹಾಕಿ ಸೆಟೆದು ನಿಂತು ಮೇಲಕ್ಕೆ ನೋಡಹತ್ತಿದ.

"ಏನಾಗಿದೆ ?" ಎಂದು ತಿರುಗಿ ಅವನನ್ನೆ ಕೇಳಿದೆ.

"ಹಃ ಹಃ ! ನುಂಗಬಾರದ ಸಿಡ್ಲ ನುಂಗೇತಿ ಮರ." ಎಂದು ಅತ್ತಿತ್ತ ನೋಡಹತ್ತಿದ.

ಯಾರಿಗೂ ಅವನ ಮಾತಿನ ಅರ್ಥವಾಗಲಿಲ್ಲ.

"ಅದಕ್ಕೇನು ಮಾಡಬೇಕಂತೀ ?" ಎಂದು ನಾನೇ ಮತ್ತೆ ಕೇಳಿದೆ.

"ಬಡ್ಡಿಗೆ ಬರೊಟಗೆ ಮ್ಯಾಗಿಂದು ಹಾರಿಸಬೇಕು. ಬಿಟ್ಟರ ಪೂರಾ ನುಂಗತ್ಯೆತಿ." ಎಂದವನೆ ಕೈಯಲ್ಲಿಯ ಕೊಡ್ಲಿಯಿಂದ ಒಂದೇಟನ್ನು ಹಾಕಿಯೆಬಿಟ್ಟ.

"ತುಂಬಿದ ಮರ ಯಾಕ ಕಡೀತೀದಿ ತಗಿಯೊ ನಿನ !" ಎಂದು ಅವನ ಕೊಡ್ಲಿಯನ್ನು ಕಸಿಯಹೋದರು ಕೆಲರು.

"ಹುಚ್ಚು ಹಿಡದದೇನು ಅವಗ ? ಕಳಸ್ರಿ ಅವನ್ನ ಆತ್ಲಾಗ !" ಎಂದು ನಗೆಯಾಡಿದರು ಕೆಲರು.

"ಕಡಿ ; ಕಡಿಯಾಕೇನು ಬ್ಯಾಡಾ ಅನ್ನಾಣಿಲ್ಲ. ಆದರ ತುಂಬಿದ ಮರ ಹೊಳ್ಯಾಗ ಪೋಪದ ಯಾರಿಗೆ ಮುಟ್ಟಿದಾಂಗ ಆಯ್ತು ? ದಂಡೀ ಮ್ಯಾಗರೆ ಕೆಡವಬಾರ್ದs !" ಎಂದು ತಮ್ಮ ಆಸೆಯನ್ನು ಸುರಿದರು ಕೆಲರು.

"ಹೋಗಲೇಳಪೊ. ಅವೆಲ್ಲ ಸುಟ್ಟ ಕಾಯಿ ; ಅವನ್ನ ತಗೊಂಡು ಏನ್ಮಾಡ್ತೀರಿ. ನೀವೆಲ್ಲೋ ಬೇರು ಬಿಟ್ಟು ಟೊಂಗೀ ಹಿಡಿಯುವರ್ಹಂಗ ಕಾಣತೀರಿ ! ಕೂಸು ಕೊಂದು ತಾಯಿನಾ ಬದಕಸಬೇಕು, ಗೊತ್ತೈತಿಲ್ಲೊ ? ಹಾಕಬೇಕು ನೋಡು, ಕೊಡ್ಲೀ ಹೊಡತ ಹೀಂಗ. ಬಡ್ಡಿ ಬದಿಕಿಕೊಂಡ್ರ, ಮಳಿಯಾದಾಗ ಚಿಗತರೆ ಚಿಗೀತ್ಯೆತಿ." ಎಂದು ಮತ್ತೊಂದೇಟನ್ನು ಹಾಕಿದನು.

ಮೇಲಿನ ಗಿಡವೆಲ್ಲ ಉರುಳಿತು. ಹೊಳೆ ಅದನ್ನು ಮುಂದೆ ಸಾಗಿಸಿತು. ಎಲ್ಲರೂ ಅದು ಚಿಗಿಯುವ ಕಾಲವನ್ನೇ ನಿರೀಕ್ಷಿಸುತ್ತ ಬಡ್ಡಿಯನ್ನೇ ನೋಡುತ್ತ ನಿಂತೆವು.

( ೧೬-೩-೧೯೩೩ )

ಕಂಬಳಿಯ ಮುದುಕ ಮಾಯವಾದನು. ಮರದಡಿಯಲ್ಲಿ ನೆರೆದಿದ್ದ ಜನವೂ ಹೊರಟುಹೋಯಿತು. ಒಬ್ಬನೇ ಉಳಿದೆ. 'ಮುಂದೆ ಎತ್ತ ಹೋಗುವದು? ಎಲ್ಲಿ ಸಿಕ್ಕೀತು ಆ ಅಗ್ನಿ? ಯಾರು ತೋರಿಸಿಯಾರು?' ಎಂದು ಯೋಚಿಸುತ್ತ ನದಿಯ ನೀರನ್ನೂ, ಆಚೆಗಿದ್ದ ಗುಡ್ಡವನ್ನೂ ಆಶೆಯ ದೃಷ್ಟಿಯಿಂದ ನೋಡುತ್ತ ನಿಂತೆ.

ಎಷ್ಟು ಕಾಲ ಹೋಯಿತೋ ತಿಳಿಯಲಿಲ್ಲ. ಮೈ ಮನಸ್ಸು ದಣಿದಿದ್ದವು. ವಿಶ್ರಾಂತಿ ಬೇಕೆನಿಸಿತು. ಅಲ್ಲಿಯೆ ಆ ಬಡ್ಡಿಗೇ ಆತು ಒರಗಿದೆ. ಒರಗಿದ್ದೊಂದೇ ತಡ, ನಿದ್ರೆ ಹತ್ತಿಯೆಬಿಟ್ಟಿತು.

ಆಗೊಂದು ಕನಸು ಕಂಡೆ.

## ಮುದಕಪ್ಪರಾಜ

"ಮಗೂ, ಇಲ್ಲಿ ಬಾ."

ಮಲಗಿದ್ದ ತಾಯಿಯ ಹತ್ತಿರ ಹೋದೆ.

"ಬಿಲ್ಲು ಬಾಣ ತೆಗೆದುಕೊಂಡೇ ಬಾ. ನೀನಿನ್ನು ಹೊರಡಬೇಕು." ಎಂದು ಮಲಗಿದ್ದ ಹುಲ್ಲ ಹಾಸಿಗೆಯ ಮೇಲೆ ಎದ್ದು ಕುಳಿತಳು.

"ಏಳಬೇಡ. ಮಲಗಿಕೊ ತಾಯೀ." ಎಂದೆ.

"ಇಲ್ಲ, ಹೊರಡುವ ಕಾಲ ಬಂದಿದೆ. ಬೇಗ ಹೊರಡಬೇಕು. ಸಿದ್ಧನಾಗಿ ಬಾ." ಎಂದಳು.

ಬೇಟೆಯ ವೇಷ ಹಾಕಿಕೊಂಡು, ಬಿಲ್ಲು ಬಾಣ ತೆಗೆದುಕೊಂಡು ಹೋದೆ.

"ಮಗೂ, ಹೀಗೇ ಪೂರ್ವದಿಕ್ಕಿಗೆ ಹೋಗು. ಕಾಲುದಾರಿಯಿದೆ. ಅದು ನಿನ್ನನ್ನು ಸರಿಯಾದ ಜಾಗಕ್ಕೆ ಒಯ್ದು ಮುಟ್ಟಿಸುತ್ತದೆ. ಅಲ್ಲಿ ಮಂಗಲ ನಿನಗಾಗಿ ಕಾದಿದೆ. ಇಲ್ಲಿ ಬಾ." ಎಂದು ಬಾಗಲು ಕೈಸನ್ನೆ ಮಾಡಿದಳು. ಬಾಗಿದೆ. ತಲೆಯ ಮೇಲೆ ಕೈಯಿಟ್ಟು ಮೂಸಿ, ಕಣ್ಣೀರು ತುಂಬಿ "ಕಳೆದ ರಾಜ್ಯ ಮರಳಿ ಪಡೆ, ನನ್ನ ರಾಜಕುಮಾರ! ಜಯವಿರಲಿ ನಿನಗೆ! ಶುಭವಾಗಲಿ! ನನ್ನ ಕಣ್ಣು ಮಾತ್ರ...." ಎಂದು ಅರ್ಧಕ್ಕೇ ನಿಲ್ಲಿಸಿದಳು.

"ಆಂ! ರಾಜಕುಮಾರ?" ಎಂದೆ.

ನಾಲಿಗೆ ತಪ್ಪಿ ನುಡಿಯಿತೆಂದು ಅದನ್ನು ಕಚ್ಚಿಕೊಂಡು "ಅದೇನಿಲ್ಲ.... ಹೊತ್ತಾಯಿತು... ಬೇಗ ಹೊರಡು ಮಗು." ಎಂದು ಮಾತು ಹಾರಿಸಿದಳು.

"ಒಬ್ಬಳನ್ನೆ ಈ ಅಟ್ಟಡವಿಯಲ್ಲಿ ಬಿಟ್ಟು ಹೇಗೆ ಹೋಗಲಿ?"

"ಆ ಚಿಂತೆ ನಿನಗೆ ಬೇಡ. ಮೊದಲು ಹೊರಡು."

ನಮಸ್ಕರಿಸಿ ಭಾರವಾದ ಮನಸ್ಸಿನಿಂದ ಹೊರಹೊರಟೆ.

ಕಾಲುದಾರಿ ಹಿಡಿದು ಪೂರ್ವದಿಕ್ಕಿಗೆ ಹೊರಟೆ. ಎಲ್ಲಿಗೆ ಎನ್ನುವದು ಗೊತ್ತಿರಲಿಲ್ಲ. ಏತಕ್ಕೆ ಎನ್ನುವದೂ ತಿಳಿದಿರಲಿಲ್ಲ. ಹೊರಡುವಾಗ ತಾಯಿ ಆಡಿದ ಮಾತು, ಅವಳ ದೃಷ್ಟಿ ತಿಳಿಸಿದ ಅರ್ಥ, ಎಲ್ಲವೂ ಅಚ್ಚಳಿಯದೆ ಮನಸ್ಸಿನಲ್ಲಿ ನಟ್ಟು ನಿಂತಿದ್ದವು; ಅವೆ ಹೊಸ ಶಕ್ತಿಸಂಚಾರಕ್ಕೆ ಮಾರ್ಗ ಮಾಡಿಕೊಟ್ಟವು. ಒಂದು ಕಡೆ ತಾಯಿಯನ್ನು ಆ ಸ್ಥಿತಿಯಲ್ಲಿ ಬಿಟ್ಟು ಹೊರಡಲಾರದೆ, ಇನ್ನೊಂದು ಕಡೆ ಆಕೆಯ ಆದೇಶವನ್ನು ಮೀರಲಾರದೆ, ಮನಸ್ಸು ಹಿಂದಕ್ಕೂ ಮುಂದಕ್ಕೂ ಜೀಕ ಆಡಿ ಕೊನೆಗೆ ಹೊರಡುವ ನಿರ್ಣಯಕ್ಕೆ ಬಂದಿತ್ತು.

'ರಾಜಕುಮಾರ! ಕಳೆದ ರಾಜ್ಯ! ಯಾವುದಿರಬೇಕು? ಎಲ್ಲ ಮಾತುಗಳೂ ಹೊಸವು! ಎಷ್ಟು ದಿನ ಅವಳಲ್ಲಿ ಹುದುಗಿಕೊಂಡಿದ್ದವಿವು! ನನ್ನ ಮನಸ್ಸಿನ ಮುಖವನ್ನೆ ಬೇರೆ ದಿಕ್ಕಿಗೆ ತಿರುಗಿಸುತ್ತಿವೆಯಲ್ಲ? ನನ್ನ ನಿಜವಾದ ತಾಯಿ ಬೇರೆ ಇರಬೇಕೇನು? ಹಾಗಿದ್ದರೆ ತಂದೆ ತಾಯಿ ಎಲ್ಲಿರ

ಬೇಕು ? ಪರಚಕ್ರಕ್ಕೆ ತುತ್ತಾಗಿರಬಹುದೇ ? ಹಾಗಿದ್ದಲ್ಲಿ ಮರಳಿ ಆ ರಾಜ್ಯ ಪಡೆಯುವದೆಂತು? ಚಿಃ, ಹುಚ್ಚು ಕಲ್ಪನೆ ಇದಲ್ಲ. ನಾನಿರುವುದೆಲ್ಲಿ, ಹೊರಟಿರುವುದೆಲ್ಲಿಗೆ, ವಿಚಾರಿಸುತ್ತಿರುವುದೇನು ? ಒಂದು ವೇಳೆ ರಾಜ ಕುಮಾರನಾಗಿದ್ದರೂ ಬೇಡರವನಾಗಿ ಬೆಳೆದಿದ್ದೇನಲ್ಲವೆ ! ಈ ಗೃಹಣಜೀವನ ಯಾಕೆ ಬಂದಿರಬೇಕು ? ಇದಕ್ಕೆ ವಿಮೋಚನೆ ಉಂಟೇ ?

'ಉಂಟು. ಉಂಟು.' ಎಂದು ಉತ್ತರ ಬಂತು. ಮನಸ್ಸಿನ ಆಚೆಗೆ ಹೋಗಿ ನೋಡಲು ತಾಯಿಯ ಗಂಭೀರಮುಖ ಅಲ್ಲಿ ನಿಂತಿತ್ತು.

ನಿರಾಶೆಯ ಹೆಡೆಯನ್ನು ಆಶೆ ಮೆಟ್ಟಿ ನಿಂತಿತು. ಹೊಸ ಚೈತನ್ಯ ತುಂಬಿತು. ದಾರಿಯೂ ಬೇಗ ಬೇಗ ಸಾಗಿತು.

'ಈ ಅದೃಷ್ಟದ ಬೆನ್ನು ಹತ್ತಿ ಪೌರುಷಗೆಡಬೇಡ' ಎಂದು ಬುದ್ಧಿ ಚುಚ್ಚಿತು. ಕೂಡಲೆ ನಿರುತ್ಸಾಹ ತಲೆಯೆತ್ತಿ ಮತ್ತೆ ನಿರಾಶೆಗೆ ಎಡೆ ಗೊಟ್ಟಿತು. ಜೀವನಕ್ಕೇ ಅರ್ಥವಿಲ್ಲ ಎನಿಸಿತು. ಈ ಅಜ್ಞಾತಜೀವನ ಕ್ಕಿಂತ ಸಾವೇನು ಕಡಿಮೆ ಎನಿಸಿತು. ನಡಿಗೆ ಸ್ವಲ್ಪ ಕುಂಠಿತವಾಯಿತು.

"ಬದುಕು ಸಾಯುವುದಕ್ಕಿದ್ದರೂ ಸಾಯುವುದೂ ಬದುಕಲಿಕ್ಕೇ. ಬದುಕು ಬೇಕಾದಾಗ ಸಾವು ಬಂದೀತು; ಸಾವು ಬೇಕಾದಾಗ ಬದುಕು ಬಂದೀತು." ಎಂದು ತಾಯಿಯೊಮ್ಮೆ ಹೇಳಿದ ಮಾತು ನೆನಪಿಗೆ ಬಂದು ಮನಸ್ಸಿನ ಡೊಂಕನ್ನು ಸರಿಮಾಡಿತು. ಮತ್ತೆ ಮುಂದೆ ಸಾಗಿದೆ.

ಮುಳ್ಳುಬಳ್ಳಿಗಳೊಳಗಿಂದ ಹಾಯ್ದು, ಬಿದಿರು ಮೆಳೆಗಳ ಸಂದಿಯಲ್ಲಿ ಸವರಿ ಹೋಗಿ, ತುಂಬಿದ ಹೊಳೆಯನ್ನು ಈಸಿ ಪಾರಾಗಿ, ಗುಡ್ಡಗಳನ್ನು ಹತ್ತಿ ಇಳಿದು, ಬಯಲಲ್ಲಿ ಬರುತ್ತಿದ್ದಾಗ ಪೂರ್ವದಿಕ್ಕಿನಿಂದ ಕಹಳೆ, ಕೊಂಬು, ನಗಾರಿ, ನವಬತ್ತು ಮೊದಲಾದ ವಾದ್ಯಗಳ ಮಂಗಳಸೂಚಕ ಧ್ವನಿಯು ಗಾಳಿಗುಂಟ ತೇಲಿ ಬಂತು. ಹಿಡಿದ ಕಾಲುದಾರಿಯೂ ಅತ್ತ ಕಡೆಗೇ ಸಾಗಿತ್ತು. ನಡಿಗೆಯ ಗತಿಯು ತಾನಾಗಿಯೆ ಹೆಚ್ಚಿತು.

ದೂರದಲ್ಲಿ ಒಂದು ಪಟ್ಟಣವು ಬಿಸಿಲ್ಗುದುರೆಯ ಮೇಲೆ ತೇಲುತ್ತ ಹೊರಟಂತೆ ಮುಸಮುಸಕಾಗಿ ಕಂಡಿತು. ಗೋಪುರಗಳೂ ಧ್ವಜಸ್ತಂಭಗಳೂ ಎದ್ದು ಕಾಣುತ್ತಿದ್ದವು. ಕೂಗಳತೆ ದಾಟಿ ಹೋಗಿ, ಕಣ್ಣಳತೆಯಲ್ಲಿ ಬಂದೊಡನೆ ರಾಜದ್ವಾರಗಳೂ, ಭವ್ಯರಾಜಮಂದಿರಗಳೂ ಕಂಡವು. ಕಾಲುದಾರಿ ನನ್ನನ್ನು

ರಾಜಮಾರ್ಗಕ್ಕೆ ಹಚ್ಚಿ ಮಾಯವಾಯಿತು.

ರಾಜಮಾರ್ಗ ಹಿಡಿದು ಸಾಗಿದೆ. ಮನೆಮನೆಯನ್ನೂ ತಳಿರು ತೋರಣಗಳಿಂದ ಅಲಂಕರಿಸಿದ್ದರು. ಮಾರ್ಗದಲ್ಲಿ ಜನರ ಓಡಾಡುವ ಸುಳಿವೇ ಕಾಣಲಿಲ್ಲ. ಹಾಗೇ ಮುಂದೆ ಸಾಗಿದೆ. ಆ ರಾಜಮಾರ್ಗ ನನ್ನನ್ನು ನೇರವಾಗಿ ಮಹಾದ್ವಾರದೆದುರು ಒಯ್ದು ಬಿಟ್ಟಿತು. ಅಲ್ಲಿ ಜನ ನೆರೆದಿತ್ತು. ಮಹಾದ್ವಾರದ ಮೇಲಿನ ಗೋಪರವು ಮುಗಿಲಿಗೆ ಮುತ್ತಿಡುತ್ತಿತ್ತು. ಮೇಲಿನ ಹೊಂಗಳಸಗಳು ಸೂರ್ಯಪ್ರಕಾಶವನ್ನು ಕನ್ನಡಿಸಿ ತಮ್ಮ ಶುಭ್ರತೆಯನ್ನು ತೋರಿಸುತ್ತಿದ್ದವು. ರಾಷ್ಟ್ರಧ್ವಜಗಳು ಗಾಳಿಯಲ್ಲಿ ತಮ್ಮ ರಾಜನ ಕೀರ್ತಿಯನ್ನು ಹರಿಬಿಡುತ್ತಿರುವಂತೆ ಕಂಡವು.

ಆ ಗೋಪುರದ ವೈಭವವನ್ನೆ ನೋಡುತ್ತ ಮುಂದೆ ಸಾಗಿದೆ. ಮಹಾದ್ವಾರದಲ್ಲಿ ನಿಂತಿದ್ದ ದ್ವಾರಪಾಲಕರು ಎಲ್ಲರನ್ನೂ ಬಿಟ್ಟು ನನ್ನೊಬ್ಬನನ್ನೇ ತಡೆದು ನಿಲ್ಲಿಸಿದರು. ನನ್ನ ವೇಷ ನೋಡಿ ನಕ್ಕರು. ಆಚೆಗೆ ಹೋಗಲು ಕೈಕೋಲಿನಿಂದ ನನಗೆ ತಿವಿದರು. ಅವಮಾನವಾದಂತೆನಿಸಿ ಅಭಿಮಾನದ ಆವೇಶ ಮುಖವನ್ನಾವರಿಸಿತು. ಮತ್ತೆ ಸಾವರಿಸಿಕೊಂಡೆ. ಎಲ್ಲವನ್ನೂ ನುಂಗಿಕೊಂಡು ಕೇಳಿದೆ 'ಏನಿದೆ?' ಎಂದು.

"ಸ್ವಯಂವರ." ಎಂದು ಒಬ್ಬ ಹೇಳಿದ.

"ನಾನೂ ಒಳಗೆ ಹೋಗಬಹುದಲ್ಲ?" ಎಂದು ಒಂದು ಹೆಜ್ಜೆ ಮುಂದಿಟ್ಟೆ. ದ್ವಾರಪಾಲಕರು ಅಡಿಯಿಂದ ಮುಡಿಯ ವರೆಗೆ ನನ್ನನ್ನೊಮ್ಮೆ ನೋಡಿ, ಗಹಗಹಿಸಿ ನಕ್ಕು "ಮಹಾರಾಜರ ಅಪ್ಪಣೆಯಾಗಿದೆ, ತಮಗೆ ಪ್ರವೇಶವಿಲ್ಲ." ಎಂದು ಬಹುಮರ್ಯಾದೆಯ ಶಬ್ದಗಳನ್ನು ಪಯೋಗಿಸಿದರೂ ಅವುಗಳ ಹಿಂದೆ 'ನಿನ್ನಂತಹನನ್ನೇನು ಬಿಡುತ್ತಾರೆ? ಹೋಗು!' ಎಂದು ಉಪಹಾಸಮಾಡುವ ಭಾವನೆಯಿತ್ತು. ನನಗೆ ಸಿಟ್ಟು ತಡೆಯದಾಯಿತು. 'ಏನೆಂದು ಅಪ್ಪಣೆಯಾಗಿದೆ? ನನಗೊಬ್ಬನಿಗೇ ಪ್ರವೇಶವೇಕಿಲ್ಲ?' ಎಂದು ಸಿಟ್ಟಿನ ಕಾವನ್ನು ಮಾತಿನ ಧ್ವನಿಯಲ್ಲಿಳಿಸಿ ಕೇಳಿದೆ.

"ವೃದ್ಧಜನರನ್ನೂ ತರುಣರಾಜರನ್ನೂ ಇಷ್ಟೆ ಒಳಗೆ ಬಿಡಬೇಕೆಂದು ಅಪ್ಪಣೆಯಾಗಿದೆ. ತಾವು ವೃದ್ಧರೇ?" ಎಂದು ಒಬ್ಬ ದ್ವಾರಪಾಲಕ ಮಾತು ಮುಗಿಸುವುದರೊಳಗಾಗಿ "ಅಥವಾ ತಾವು ತರುಣರಾಜರೇ?" ಎಂದು

ಇನ್ನೊಬ್ಬ ದ್ವಾರಪಾಲಕ ಕೇಳಿ ಪೂರ್ತಿಮಾಡಿದ. 'ಅಲ್ಲ ಎಂಬದು ಮುಖದ ಮೇಲೇ ಕಾಣುತ್ತದೆ.' ಎನ್ನುವ ಅರ್ಥವಿತ್ತು ಅವನ ಪ್ರಶ್ನೆಯ ಹಿಂದೆ.

ಅವರಾಡಿದ ಮಾತಿನ ಅರ್ಥವಾಗಲಿಲ್ಲ ನನಗೆ. ಅಲ್ಲಿಂದ ಹೊರಡುವದರಲ್ಲಿದ್ದೆ. ಅಷ್ಟರಲ್ಲಿ ಜಯಜಯಕಾರದ ಧ್ವನಿ ಕೇಳಿಸಿತು. ನೋಡಿದೆ. ವಂದಿಮಾಗಧರಿಂದ ಮೊದಲುಮಾಡಿ ರಾಜಪರಿವಾರಸಮೇತ ಯಾವುದೋ ದೇಶದ ರಾಜರೊಬ್ಬರು ದಯಮಾಡಿಸಿದರು. 'ಹುಂ, ದಾರಿಯಲ್ಲಿ ನಿಲ್ಲಬೇಡಿ. ದಯಮಾಡಿಸಿ.' ಎಂದು ದ್ವಾರಪಾಲಕರು ನನ್ನನ್ನು ಅಲ್ಲಿ ನಿಲ್ಲಗೊಡದೆ ದಬ್ಬಿಯೆಬಿಟ್ಟರು.

ಆ ಜಾಗ ಬಿಟ್ಟು ಯಾವುದೋ ಒಂದು ರಾಜಬೀದಿಯನ್ನು ಹಿಡಿದು ಹೊರಟೆ. ಮನಸ್ಸು ಏನೇನನ್ನೊ ಗುಣಿಗುಣಿಸುತ್ತಿತ್ತು. ಎಷ್ಟು ಹೊತ್ತು ನಡೆದನೋ ತಿಳಿಯಲಿಲ್ಲ. ಎಡಬಲಕ್ಕೂ ನೋಡಿರಲಿಲ್ಲ. ನಡೆದು ನಡೆದು ಕಾಲುಗಳು ಸೋತವು. ಗಂಟಲು ಆರಿತು. ನೀರು ಕುಡಿಯಬೇಕೆನಿಸಿತು. ರಾಜಬೀದಿಗುಂಟ ಏರಡೂ ಮಗ್ಗಲಿಗೂ ಎದ್ದು ನಿಂತ ಅಂತಸ್ತಿನ ಮನೆಗಳ ಕಡೆಗೆ ಮುಖವೆತ್ತಿ ನೋಡಿದೆ. ಬಾಗಿಲು ತೆರೆದಿದ್ದರೂ ಜನರ ಸುಳಿವೇ ಕಾಣಲಿಲ್ಲ. ಹಾಗೇ ಮುಂದೆ ನಡೆದೆ. ಎಲ್ಲ ಸಂದಿಗೊಂದಿಗಳಲ್ಲಿಯೂ ಹಾಯ್ದೆ. ಬೇಸರಗೊಂಡು ಊರ ಹೊರಗಾದರೂ ಹೋಗಬೇಕೆಂದು ಒಂದು ಸಣ್ಣ ಸಂದಿಯನ್ನು ಹಿಡಿದು ಅದರ ತುದಿಯ ವರೆಗೂ ಹೋದೆ. ಆ ತುದಿಯಲ್ಲಿದ್ದ ಒಂದು ಮನೆಯಲ್ಲಿ ಹಣಿಕಿಕ್ಕಿದೆ. ಒಬ್ಬ ಮುಪ್ಪಿನ ಮುದುಕ ಗೋಡೆಗೆ ಒರಗಿಕೊಂಡು ಕುಳಿತದ್ದು ಕಂಡಿತು.

ನಿರಿಗೆಗಟ್ಟಿದ ಮುಖ, ಅರೆಮುಚ್ಚಿದ ಕಣ್ಣು, ಅರೆತೆರೆದ ಬಾಯಿ, ಬಿಳಿಹುಬ್ಬು, ಬಿಳಿಮೀಸೆ, ಬಿಳಿಗಡ್ಡ, ಅರೆಬೆತ್ತಲ ಮೈ, ಎಲ್ಲ ಮುಪ್ಪನ್ನು ತೋರಿಸುತ್ತಿದ್ದರೂ ಆದರವನ್ನು ಹುಟ್ಟಿಸುತ್ತಿದ್ದವು. ಶುಭ್ರತೆಯ ಶಾಂತಿ ಆಕರ್ಷಕವಾಗಿತ್ತು.

ದಾಹ ಹೆಚ್ಚಾಗಿ ಒಳಗೆ ಕಾಲಿಟ್ಟೆ. ಮುದುಕನಿಗೆ ನಾನು ಒಳಗೆ ಬಂದದ್ದು ಗೊತ್ತಾಗಲಿಲ್ಲ. ಇನ್ನೂ ಹಾಗೇ ಕುಳಿತಿದ್ದ. "ಕುಡಿಯಲಿಕ್ಕೆ ಸ್ವಲ್ಪ ನೀರು ಕೊಡುತ್ತೀರಾ?" ಎಂದು ಮೆಲ್ಲಗೆ ಕೇಳಿದೆ. ಮುದುಕ ಸರಿದಾಡಲಿಲ್ಲ. ನನ್ನ ಮಾತಿಗೆ ಉತ್ತರ ಕೊಡಲಿಲ್ಲ. ಕೇಳಿಸಿರಲಿಕ್ಕಿಲ್ಲೆಂದು

ಇನ್ನೊಷ್ಟು ಗಟ್ಟಿಯಾಗಿ ಕೇಳಿದೆ. ಮುದುಕ ಒಮ್ಮೆಲೆ ಎದ್ದ. ನನ್ನನ್ನು ದಿಟ್ಟಿಸಿ ನೋಡಿದ. ಹತ್ತಿರ ಬಂದು ಮುಖವನ್ನು ಇನ್ನೂ ದಿಟ್ಟಿಸಿ ಏನನ್ನೊ ಗುರುತಿಸಿದವರಂತೆ ಮುಗುಳುನಗೆ ನಕ್ಕು "ಏನು ಬೇಕು ?" ಎಂಬು ಕೈಸನ್ನೆ ಮಾಡಿ ಕೇಳಿದ. "ನೀರು" ಎಂದೆ. "ಒಳಗೆ ಬನ್ನಿ." ಎಂದು ಕರೆದು ತಾನು ಮುಂದಾದ ; ನಾನು ಹಿಂಬಾಲಿಸಿದೆ.

ಮುದುಕ ಒಂದಾದ ಮೇಲೊಂದರಂತೆ ಆರೇಳು ಬಾಗಿಲುಗಳೊಳಗಿಂದ ಹಾಯಿಸಿ ನನ್ನನ್ನು ಒಂದು ಅಚ್ಚುಕಟ್ಟಾಗಿ ಅಲಂಕೃತವಾಗಿದ್ದ ಕಲಾಮಂದಿರ ದಲ್ಲಿ ಒಯ್ದು, ಕುಳಿತುಕೊಳ್ಳಲು ಒಂದು ಸುಖಾಸನ ತೋರಿಸಿ ತಾನು ಬೇರೆ ಕಡೆಗೆ ಹೋದ. ಅಲ್ಲಿ ಕಂಡಿದ್ದೆಲ್ಲವನ್ನೂ ಕೇಳಿ ತಿಳಿಯಬೇಕೆಂಬ ಹಂಬಲವು ಒಳಗಿದ್ದರೂ ಆಶ್ಚರ್ಯಭಾವವು ನನ್ನನ್ನು ಮೂಕವಾಗಿಸಿತ್ತು. ಬರಿ ಸಾಕ್ಷಿ ಯಾಗಿ ಕುಳಿತಿದ್ದೆ.

ಹೋದ ಕೂಡಲೆ ಎದುರಿನ ಗೋಡೆಗೆ ಒಂದು ಎತ್ತರವಾದ ನಿಲ್ಲುಗನ್ನಡಿ, ಅದರ ಹತ್ತಿರ ಅಷ್ಟೆ ಎತ್ತರವಾದ ಇನ್ನೊಂದು ಕನ್ನಡಿ. ತೆಳ್ಳನ್ನ ಗುಲಾಬಿ ಪರದೆಯು ಅದನ್ನು ಮುಚ್ಚಿತ್ತು. ಸುವರ್ಣರೇಖೆಯ ಅದರ ಚೌಕಟ್ಟು ಆ ಪರದೆಯೊಳಗಿಂದಲೂ ಹೊರಗೆ ಕಾಣುತ್ತಿತ್ತು. ಇದರ ಹತ್ತಿರ ಇನ್ನೊಂದು ಮುಸುಕಿಲ್ಲದ ನಿಲುಗನ್ನಡಿ. ಅದರಾಚೆ ಹಸಿರು ಪರದೆಯನ್ನು ಹೊದ್ದು ಕೊಂಡ ಇನ್ನೊಂದು ಚೌಕಟ್ಟು. ಹೀಗೆ ಸುತ್ತಲಿನ ನಾಲ್ಕು ಗೋಡೆಗಳೂ ತಮ್ಮನ್ನು ಮರೆಮಾಡಿಕೊಂಡಿದ್ದವು. ತೂಗುಬಿಟ್ಟ ಈ ಕನ್ನಡಿಗಳ ಮೇಲ್ಭಾ ಗಕ್ಕೆ ಚಿಗರಿ, ಸಿಂಹ, ಹುಲಿ ಮೊದಲಾದ ಪ್ರಾಣಿಗಳ ಮುಖಗಳು ಕಣ್ಣು ಬಿಟ್ಟು ನೋಡುತ್ತಿದ್ದವು. ಆಕಾಶಬಣ್ಣದ ಛತ್ತು ಮೇಲ್ಭಾಗವನ್ನೆಲ್ಲ ಮುಚ್ಚಿತ್ತು. ಕೆಂಪು ನೀಲಿ ಹಳದಿ ಬಣ್ಣಗಳ ಕಾಜಿನ ಹಂಡೆಗಳು ಅದರೊಳ ಗಿಂದ ಜೋತು ಬಿದ್ದಿದ್ದವು. ನಾನಾಬಗೆಯ ಸುಖಾಸನಗಳು ವಿಶ್ರಾಂತಿ ಕೊಡಲು ಕಾದಿದ್ದವು. ಹಾಸಿದ ರತ್ನಗಂಬಳಿ ಕಾಲಿಗೆ ಹಿತವಾಗಿತ್ತು. ಮೂಲೆ ಮೂಲೆಗಳಿಂದ ಸುವಾಸನೆಯು ತೇಲಿಬರುತ್ತಿತ್ತು.

ಮುದುಕ ಒಳಗಿನಿಂದ ಬಂದು "ಏಷ್ಟಾಗಬೇಕು ತಮಗೆ ?" ಎಂದು ಕೇಳಿದ. ನನಗೆ ಇತಿಮಿತಿಯಾಯಿತು. "ಸ್ವಲ್ಪ ನೀರು ಬೇಕು" ಎಂದು ಮತ್ತೆ ಹೇಳಿದೆ. "ಕುಡಿಯೋದಕ್ಕೇ ?" ಎಂದು ಮುದುಕ ಕೇಳಿದ.

"ಹುಂ." ಎಂದೆ. ಮುದುಕ ಮತ್ತೆ ಒಳಗೆ ಹೊರಟುಹೋದ. ಮತ್ತೆ ನಾನು ಅತ್ತಿತ್ತ ನೋಡಹತ್ತಿದೆ. ನೋಡಿ ನೋಡಿದಂತೆ ನನ್ನ ಆಶ್ಚರ್ಯ ಇನ್ನೂ ಹೆಚ್ಚಾಯಿತು. ಆ ಅರೆಬೆತ್ತಲೆಯ ಮುದುಕನಿಗೂ ಈ ರಾಜವೈಭವಕ್ಕೂ ಎಲ್ಲಿಗೆಲ್ಲಿಗೆ ಸಂಬಂಧ! ಎಂದುಕೊಂಡೆ. ಮುದುಕನ ಬಗ್ಗೆ ಆದರ, ಭಯ ಎರಡೂ ಒಮ್ಮೆಲೆ ಹುಟ್ಟಿದವು. ಮುದುಕ ನನ್ನನ್ನು ದಿಟ್ಟಿಸಿ ನೋಡಿದಾಗ ಕಣ್ಣುಗಳಲ್ಲಿ ಮಿಂಚಿದ ಆ ತೇಜವನ್ನು ನೆನೆದು ಮೈ ಜುಮ್ಮೆಂದಿತು. ಕುಳಿತ ಸುಖಾಸನದಲ್ಲಿಯೇ ಹಿಂದಕ್ಕೆ ಒರಗಿ ಅತ್ತ ಇತ್ತ ನೋಡಿದೆ. ಒಂದು ಮೂಲೆಯಲ್ಲಿ ದೊಡ್ಡದೊಂದು ಮಣೆಯ ಮೇಲೆ ನಾನಾತರಹದ ಕುಂಚಗಳು ಅಸ್ತವ್ಯಸ್ತವಾಗಿ ಬಿದ್ದಿದ್ದವು. ಹತ್ತಿರದಲ್ಲಿಯೆ ಗಡ್ಡ ಮೀಸೆಗಳೂ ಇದ್ದವು. ಮೇಣದಂತಹ ಒಂದು ಪದಾರ್ಥವೂ ಅಲ್ಲಿ ಕಂಡಿತು. ಇದೆಲ್ಲ ನೋಡಿ ನನಗೆ ಕುತೂಹಲ ಹುಟ್ಟಿತು. "ಇದೇನಿರಬಹುದು ?" ಎಂದು ವಿಚಾರಿಸಿಯೇ ವಿಚಾರಿಸಿದೆ. ಏನೂ ಹೊಳೆಯಲಿಲ್ಲ. ಮುದುಕನನ್ನೆ ಕೇಳಿದರಾಯಿತು ಎಂದು ಕೊಂಡು ಹಿಂದಕ್ಕೆ ಒರಗಿದೆ.

ಅಷ್ಟರಲ್ಲಿ ಮುದುಕ ಬಂದ. ಕೈಯಲ್ಲಿ ಬೆಳ್ಳಿಯ ಪಾತ್ರೆ ಇತ್ತು. ನನ್ನೆದುರಿಗೆ ಅದನ್ನಿಟ್ಟು "ಸ್ವೀಕರಿಸಬೇಕು" ಎಂದ. ಆ ರೀತಿ, ಆ ವಿನಯ, ಆ ಸೌಜನ್ಯಗಳನ್ನು ನೋಡಿಯಂತೂ ಆತನ ಬಗ್ಗೆ ನನ್ನಲ್ಲಿ ಒಂದು ತರಹದ ಆತ್ಮೀಯತೆ ಹುಟ್ಟಿತು. ವಾತ್ಸಲ್ಯದಿಂದ ಮುದುಕನ ಮುಖ ನೋಡಿ "ಇದೇಕೆ? ನೀರಾಗಿದ್ದರೆ ಸಾಕಿತ್ತು." ಎಂದೆ.

"ಎರಡೂ ಅಷ್ಟೆ. ದಯಮಾಡಿ ತಕೊಳ್ಳಬೇಕು; ಶ್ರಮಪರಿಹಾರ ವಾಗುತ್ತದೆ; ದೇಹಕ್ಕೆ ಹಿತವೂ ಆಗುತ್ತದೆ."

"ಒಲ್ಲೆ ಅನ್ನಲಾರದ ಹಾಗೆ ಮಾಡಿಬಿಟ್ಟಿದೆ ನಿಮ್ಮ ನಡತೆ ಮುದಕಪ್ಪಾ. ಆಗಲಿ," ಎಂದು ಬೆಳ್ಳಿಯ ಪಾತ್ರೆಯನ್ನು ಕೈಗೆ ತೆಗೆದುಕೊಂಡೆ. ಮುದುಕ ಏನನ್ನೂ ಮಾತಾಡದೆ ನನ್ನನ್ನೆ ನೋಡುತ್ತಿದ್ದ.

ಹಾಲು ಕುಡಿಯುವುದು ಮುಗಿಯಿತು. ಮುದುಕ ದೂರ ಸರಿದು ನಿಂತು, ಹಸಿರು ಪರದೆಯಿದ್ದ ಚೌಕಟ್ಟನ್ನೊಮ್ಮೆ ನನ್ನನ್ನೊಮ್ಮೆ ಸೂಕ್ಷ್ಮ ವಾಗಿ ನೋಡುತ್ತಿದ್ದ. "ಮುದಕಪ್ಪಾ, ನೀನೇಕೆ ಹೋಗಿಲ್ಲ ಸ್ವಯಂವರ ಮಂಟಪಕ್ಕೆ ?" ಎಂದು ನಾನೇ ಮತ್ತೆ ಮಾತಿಗೆ ಪ್ರಾರಂಭಿಸಿದೆ.

ಮುದುಕ ಇನ್ನೂ ಆ ಚೌಕಟ್ಟನ್ನು ನೋಡುವುದರಲ್ಲಿಯೆ ಮೈಮರೆತಿದ್ದ. ಮತ್ತೊಮ್ಮೆ ಕೇಳಿದೆ. ಒಮ್ಮೆಲೆ ತಿರುಗಿ ನನ್ನ ಹತ್ತಿರ ಬಂದು "ತಪ್ಪಾಯ್ತು, ಕ್ಷಮಿಸಿ, ಅರಮರಳು. ವಯಸ್ಸಾಯಿತು. ನಿಮಗೆ ಹೊತ್ತಾಯಿತಲ್ಲವೇ? ಎಷ್ಟಾಗಬೇಕು? ನಲವತ್ತೈದೊ, ಐವತ್ತೋ?" ಎಂದು ಕೇಳಿದ.

ಅವನು ಕೇಳಿದ ಪ್ರಶ್ನೆಯ ತಲೆಬಾಲ ಯಾವುದೂ ನನಗೆ ಗೊತ್ತಾಗಲಿಲ್ಲ. "ನಾನು ಕೇಳಿದ್ದು ಅದಲ್ಲ. ನೀವೇಕೆ ಹೋಗಲಿಲ್ಲ ಸ್ವಯಂವರ ಮಂಟಪಕ್ಕೆ ಎಂದೆ." ಎಂದು ಮತ್ತೆ ಅದನ್ನೆ ಉಚ್ಚರಿಸಿದೆ.

"ನನ್ನಂಥವನು ಅಲ್ಲಿ ಹೋಗಿ ಮಾಡುವುದೇನು? ಹೋಗುವವರು ಹೋಗಿದ್ದಾರೆ, ಆಯಿತು. ಇನ್ನೂ ನೀವು ಹೋದರೆ........" ಎಂದು ಮುದುಕ ನಕ್ಕ.

"ಮುದುಕಪ್ಪಾ, ಅದೇನು ಅಲ್ಲಿ? ನೀನು ಚಿತ್ರಬರೆಯುತ್ತಿಯಾ?" ಎಂದು ಕೇಳಿದೆ.

"ಹೌದು. ಆದರೆ........" ಎಂದು ಉಸಿರ್ಗರೆದ ಮುದುಕ.

"'ಆದರೆ' ಏನು ಮುದುಕಪ್ಪಾ? ಏನು ಬಹಳ ಬೇಸರವೇ?" ಎಂದೆ.

"ಇದು ಮಹಾ ಪಾಪದ ಕೆಲಸ. ಕೊಲೆಮಾಡಿದಷ್ಟು ಪಾಪ ಬರುತ್ತದೆ ನನಗೆ! ಆದರೇನು? ಉಪಾಯವಿಲ್ಲ...." ಎಂದು ಮುದುಕ ಚಡಪಡಿಸಿದ.

"ಇದೇನು ಮುದುಕಪ್ಪಾ, ಹೀಗಂತೀಯಾ? ಅಂಥದೇನಾಗಿದೆ ಈಗ?"

"ಹೇಳಿದರೆ ಪರಿಹಾಸ ಮಾಡಬಹುದು ನೀವು. ಇಲ್ಲವೆ ನಂಬಲಿಕ್ಕೂ ಇಲ್ಲ ಅದನ್ನು."

"ಅದೇನು, ಹೇಳಿಯಾದರೂ ಹೇಳು ಮುದುಕಪ್ಪಾ?"

"ನಮ್ಮ ರಾಜಕುಮಾರಿಯ ಸ್ವಯಂವರ ಇವೊತ್ತು. ನಿಮಗೂ ಗೊತ್ತಿರಬೇಕು?"

"ಓಹೋ! ಗೊತ್ತಿದೆ. ಅದೇನೊ ವೃದ್ಧಜನರನ್ನೂ ತರುಣರಾಜರನ್ನೂ ಮಾತ್ರ ಒಳಗೆ ಬಿಡುತ್ತಾರಂತೆ. ಅತ್ತ ಹೋಗಿದ್ದೆ. ಬಿಡಲಿಲ್ಲ. ಇತ್ತ ಬಂದೆ."

"ಹೀಗೋ? ಸರಿಯಾಯಿತು. ರಾಜರ ಮೈ ಮುಪ್ಪಾಗಿದ್ದರೂ ಮನಸ್ಸು ಮುಪ್ಪಾಗಿರೋದಿಲ್ಲ. ಅದೇ ನನಗೆ ಉರುಲು. ಅಂಥವರಿಗೆ ಬಣ್ಣ ಬಳಿದೂ ಬಳಿದೂ........"

"ಆಂ! ಅಂದರೆ....ನೀನು....ಮುದುಕಪ್ಪಾ....."

"ಹುಂ, ಹುಂ; ಅದೇ. ನಮ್ಮ ರಾಜಕುಮಾರಿಯ ದೈವ ನೋಡ ಬೇಕು ಇನ್ನು."

"ಅಂದರೆ....ಎಷ್ಟು ಜನಕ್ಕೆ ನೀನು...."

"ಬಹಳ ಜನ. ನಾನು ಸಿದ್ಧಿಸಿಕೊಂಡ ಕಲೆಯೆ ನನಗೆ ಉರುಲಾಗಿದೆ. ಅದರ ವ್ಯಾಪಾರ ನಡೆದುಬಿಟ್ಟಿದೆ. ಹಣ ಬಂದರೂ ತೃಪ್ತಿ ಇಲ್ಲ. ಕಲೆ ವ್ಯಾಪಾರಕ್ಕಲ್ಲ. ಜನ ಈಗ ಅದರ ತಪ್ಪು ಉಪಯೋಗಮಾಡಿಕೊಳ್ಳು ತ್ತಿದ್ದಾರೆ. ಅದರಿಂದ ನನ್ನ ಕಲೆಯ ಪರಿಣಾಮ ಹಿತಕ್ಕಿಂತ ಅಹಿತದಲ್ಲೆ ಆದೀತೆಂಬ ಭಯ ನನ್ನನ್ನು ಹಿಂಡಿ ಹಿಪ್ಪೆಮಾಡಿದೆ. ದುಃಖದ ಬಳ್ಳಿಗೆ ಕೊನೆಗೆ ಆನಂದದ ಹೂ ಬಿಟ್ಟೀತೆಂದು ಏನೋ ಒಂದು ಆಶೆಯನ್ನಿಟ್ಟು ಕೊಂಡು ಕೆಲಸ ಇನ್ನೂ ನಡೆಸಿದ್ದೇನೆ, ಅಷ್ಟೆ."

ಮುದುಕ ಸಾಮಾನ್ಯನಲ್ಲ ಎನಿಸಿತು ನನಗೆ. ತನ್ನ ಮಾತು ಮುಗಿ ದೊಡನೆ ಹಸಿರು ಪರದೆಯ ಚೌಕಟ್ಟಿನ ಕಡೆಗೆ ನೋಡಿದ. ಏನೋ ತನ್ನಲ್ಲಿಯೆ ನಿರ್ಧರಿಸಿಕೊಂಡ. ಮುಗುಳುನಗೆ ನಕ್ಕ. ನನ್ನ ತೀರ ಹತ್ತಿರ ಬಂದು "ಬನ್ನಿ. ನಾಲವತ್ತೈದೇ? ಏಳು ವರ್ಷ ಸಾಕೇ?" ಎಂದು ಕೇಳಿದ.

"ಹಾಗೆಂದರೇನು ಮುದುಕಪ್ಪಾ?" ಎಂದು ಕೇಳಿದೆ.

"ಅದೆಲ್ಲಾ ಹಿಂದುಗಡೆ ಹೇಳುತ್ತೇನೆ, ಬನ್ನಿ. ನಾನೇ ಸರಿಮಾಡು ತ್ತೇನೆ. ನಲವತ್ತೈದು, ಮೂರೇ ವರ್ಷ ಸಾಕು. ಹೊತ್ತಾಗುತ್ತದೆ, ಹುಂ, ಬೇಗ." ಎಂದು ಮುದುಕ ನನ್ನ ಮಾತನ್ನೆ ಹಾರಿಸಿಬಿಟ್ಟ.

"ಹಾಗೆ ಹೋದರೆ ಅಲ್ಲಿ ಒಳಗೆ ಬಿಡಬಹುದೇ?" ಎಂದು ಬೇರೆ ಪ್ರಶ್ನೆಯನ್ನೆ ಕೇಳಿದೆ.

"ಬಿಡದೆ ಏನು?" ತಲೆಯಲ್ಲಾಡಿಸಿ ಬಣ್ಣದ ಮೂಲೆಯ ಕಡೆಗೆ ಹೊರಟ. ಮಂತ್ರಮುಗ್ಧನಂತೆ ಅವನ ಹಿಂದೆಯೆ ಹೊರಟೆ. ಮುದುಕ ಒಂದು ಆಸನದಲ್ಲಿ ನನ್ನನ್ನು ಕೂಡಿಸಿ ಬಣ್ಣ ಹಚ್ಚಿದ; ಗಡ್ಡಮೀಸೆ ಕಟ್ಟಿದ;

ಜೀವರೇಖೆಗಳನ್ನು ಎಳೆದ; ಎಲ್ಲ ಮುಗಿದ ಮೇಲೆ ಹುಬ್ಬಿನ ನಡುವೆ ಒಂದು ತಿಲಕವನ್ನಿಟ್ಟ. ಎದ್ದು ನಿಲ್ಲಿಸಿ ಆಪಾದಮಸ್ತಕದ ವರೆಗೂ ಒಂದೆರಡು ಸಾರೆ ದಿಟ್ಟಿಸಿ ನೋಡಿದ. 'ಸರಿಯಾಗಿದೆ' ಎಂದು ತಲೆಯಲ್ಲಾಡಿಸಿ ತನಗೆ ತಾನೇ ಒಪ್ಪಿಗೆ ಕೊಟ್ಟ. ಎದುರಿಗಿದ್ದ ಒಂದು ನಿಲುಗನ್ನಡಿಯೆದುರಿಗೆ ನನ್ನನ್ನು ಒಯ್ದು ನಿಲ್ಲಿಸಿ 'ನೋಡಿಕೊಳ್ಳಿ' ಎಂದ. ನೋಡಿಕೊಂಡೆ; ನನ್ನ ಗುರ್ತು ನನಗೇ ಹತ್ತಲಿಲ್ಲ. ನಕ್ಕೆ. ನಾನು ಕನ್ನಡಿಯ ಎದುರಿಗೆ ನಿಂತಿರುವಾಗಲೆ ಮುದುಕ ನನ್ನೆದುರಿಗೆ ಬಂದು, ಆ ಕನ್ನಡಿಯ ಹತ್ತಿರ ಇದ್ದ ಇನ್ನೊಂದು ಚೌಕಟ್ಟಿನ ಮೇಲಿದ್ದ ಹಸಿರು ಪರದೆಯನ್ನು ಸರಿಸಿದ. ನೋಡಿದೆ, ಸುಂದರ ತರುಣಿಯೊಬ್ಬಳು ಕೈಯಲ್ಲಿ ಮಾಲೆಯನ್ನು ಹಿಡಿದು ನಿಂತಿದ್ದಾಳೆ. ಆ ಕಣ್ಣು, ಹುಬ್ಬು, ಮೂಗು, ತುಟಿ, ಮೈಮಾಟ, ನಿಲುವು ಎಲ್ಲ ಕೂಡಿ ನನ್ನ ಮನಸ್ಸನ್ನು ಒಮ್ಮೆಲೆ ಸೆಳೆದುಬಿಟ್ಟವು. ಎದುರಿಗಿನ ಕನ್ನಡಿಯಲ್ಲಿ ಕಾಣುತ್ತಿದ್ದ ನನ್ನ ಮುಪ್ಪಿನ ರೂಪವನ್ನೂ, ಚೌಕಟ್ಟಿನಲ್ಲಿ ಚಿತ್ರಿತವಾಗಿದ್ದ ಆ ಸುಂದರ ತರುಣಿಯನ್ನೂ ನೆನೆದು ಮರೆಯಾಗಿದ್ದ ನನ್ನ ಹರೆ ತಬ್ಬಿಬ್ಬುಗೊಂಡಿತು. ಮುಖ ಕೆಳಗಾಯಿತು. ಆದರೂ ಒಳಹೊಕ್ಕ ಆ ಸುಂದರ ರೂಪ ಮರೆಯಾಗಲಿಲ್ಲ.

"ಮುದಕಪ್ಪಾ ಯಾರದಿದು?" ಎಂದೆ.

"ನಮ್ಮ ರಾಜಕುಮಾರಿಯುದು. ಹೇಗಿದೆ?"

"ಸುಂದರವಾಗಿದೆ."

"ಒಪ್ಪಿಗೆಯಾಯಿತೇ?"

"ಅಂದರೆ?"

"ಚಿತ್ರ, ಅವಳಲ್ಲ."

ನಾನೂ ನಕ್ಕೆ. ಉತ್ತರ ಕೊಡಲಿಲ್ಲ. ಒಪ್ಪಿಗೆಯನ್ನು ನನ್ನ ನಗೆಯೇ ಕೊಟ್ಟಿತ್ತು.

ಮುದುಕ ಏತಕ್ಕೋ ಒಳಗೆ ಹೋದ. ನನ್ನ ಲಕ್ಷ್ಯ ಉಳಿದೆರಡು ಚೌಕಟ್ಟುಗಳ ಕಡೆಗೆ ಹೋಯಿತು. ಒಂದರ ಪರದೆ ಸರಿಸಿ ನೋಡಿದೆ. ಒಬ್ಬ ನಡುವಯಸ್ಸಿನ ಹೆಣ್ಣುಮಗಳ ಚಿತ್ರ. ರಾಜಕಳೆ ಮುಖದ ಮೇಲೆ ಒಡೆದು ಕಾಣುತ್ತಿತ್ತು. ನೋಡುತ್ತಿದ್ದ ನನ್ನ ಕಣ್ಣುಗಳು ಪಿಳುಕಿಸದೆ

ಹಾಗೇ ನಿಂತವು. ಮಿಂಚೊಂದು ಬಂದು ನನ್ನ ಮೈಯಲ್ಲಿ ಹೊಕ್ಕಂತಾಯಿತು. ಮೈ ಜುಮ್ಮೆಂದಿತು. ಮಧುರಭಾವ ಹುಟ್ಟಿತು. ತಲೆ ತಾನಾಗಿಯೇ ಬಾಗಿತು.

ಮುಂದಿನ ಚೌಕಟ್ಟಿನ ಪರದೆ ತೆರೆಯಬೇಕೆಂದು ಅತ್ತ ಹೊರಟೆ. ಅಷ್ಟರಲ್ಲಿ ಮುದುಕ ಒಳಗೆ ಬಂದ. ಅವನನ್ನು ಕೇಳಿದೆ "ಯಾರದದು ಮುದಕಪ್ಪಾ?" ಎಂದು.

ತಟ್ಟನೆ ಏನೋ ಹೇಳಬೇಕೆಂದು ಮುಂದೆ ಬಂದ ನಾಲಗೆಯನ್ನು ಮುದುಕ ಅಲ್ಲಿಗೇ ತಡೆದು ನಿಲ್ಲಿಸಿದ. ಮನಸ್ಸಿನಲ್ಲಿಯ ಉದ್ವೇಗ ಮುಖದ ಮೇಲೆ ಮೂಡಿ ಬರದಂತೆ ನುಂಗಿಕೊಂಡು ಹೇಳಿದ, "ಇದು ಒಬ್ಬ ರಾಣಿಯದು." ಎಂದು.

"ಯಾವ ದೇಶದ ರಾಣಿ?"

"ರೂಪದೇಶದ ರಾಣಿ."

"ಎಲ್ಲಿದೆ ಇವರ ರಾಜ್ಯ?"

"ಇತ್ತು."

"ಈಗ?"

"ಇಲ್ಲ."

"ಏನಾಯ್ತು?"

"ಹಾಳಾಯ್ತು."

"ಯಾರು ಹಾಳುಮಾಡಿದರು?"

"ಮಾತು."

"ಮಾತು?"

"ಹೌದು, ಮಾತಿಗೆ ಮಾತು. ಮಾತೇ ನುಂಗಿತು ಆ ರಾಜ್ಯವನ್ನು."

"ಎಲ್ಲಿತ್ತು?"

"ಇಲ್ಲಿಯೆ ಸಮೀಪದಲ್ಲಿ. ಈ ಗುಡ್ಡ ಹತ್ತಿ ಆಚೆಗೆ ಇಳಿದು, ನದಿ ದಾಟಿದರೆ ಆಯಿತು, ಅವರ ರಾಜ್ಯವೇ. ರಾಜ, ರಾಣಿ, ಮಕ್ಕಳು ಎಲ್ಲರೂ ಹುಡಿಗೂಡಿದರು. ವಂಶವೃಕ್ಷವೇ ಉರುಳಿಬಿದ್ದಂತಾಗಿದೆ!"

ಮುದುಕನ ಕಣ್ಣಿನಲ್ಲಿ ನೀರು ತುಂಬಿದವು. ಉದ್ವೇಗ ತಡೆಯಲಾರದೆ ಏನೊ ನೆವ ತೆಗೆದು ಮತ್ತೆ ಒಳಕ್ಕೆ ಹೊರಟುಹೋದ.

ಕುತೂಹಲ ತಡೆಯದೆ ನಾನು ಉಳಿದಿನ್ನೊಂದು ಚೌಕಟ್ಟಿನ ಪರದೆಯನ್ನು ಸರಿಸಿದೆ. ನೋಡಿ ಚಕಿತನಾಗಿ ನಿಂತೆ. ನನ್ನದೇ ರೂಪ! ಗಡ್ಡ, ಮೀಸೆ! ವೇಷ ಕೂಡ ನನ್ನ ಹಾಗೇ! ನಿಲುವು ಮಾತ್ರ ನನಗಿಂತ ಎತ್ತರ, ಗಂಭೀರ. ನೋಡಿ ನೋಡಿದಂತೆ ಆತ್ಮೀಯ ಭಾವ ಬೆಳೆಯಿತು. ಗುಡಿಸಿಲು ಬಿಟ್ಟು ಬರುವಾಗ "ಕಳೆದ್ದ ರಾಜ್ಯ ಮರಳಿ ಪಡೆ, ನನ್ನ ರಾಜಕುಮಾರ" ಎಂದುಸಿರಿದ ತಾಯಿಯ ಮಾತೂ ನೆನಪಿಗೆ ಬಂದು 'ಹುಡಿಗೂಡಿದವರು ನನ್ನವರೇ ಇರಬಹುದೇನು? ಹಾಳಾದ ರಾಜ್ಯ ನನ್ನವರದೇ ಇದ್ದೀತೇನು?' ಎಂದು ಮನಸ್ಸು ಏನನ್ನೋ ಹಚ್ಚಿಕೊಂಡು ಕಳವಳಕ್ಕೊಳಗಾಯಿತು.

ಅಷ್ಟರಲ್ಲಿ ಮುದುಕ ಬಂದು "ಹೊತ್ತಾಯಿತು. ಸ್ವಯಂವರ ಮಂಟಪಕ್ಕೆ ಹೋಗುವದಿಲ್ಲವೇ ?" ಎಂದು ಕೇಳಿದ.

"ಹೋಗಿಯಾದರೂ ಏನು ಮಾಡುವುದು ಬಿಡು ಮುದುಕಪ್ಪಾ." ಎಂದು ನಿರಾಸೆಯನ್ನು ವ್ಯಕ್ತಿಪಡಿಸಿದೆ.

ಮುದುಕ ನನ್ನ ಬೆನ್ನು ಚಪ್ಪರಿಸಿ, ತಲೆ ಮುಟ್ಟಿ "ನಿರಾಸೆ ಏತಕ್ಕೆ? ಅದೃಷ್ಟವನ್ನು ಯಾರು ಕಂಡಿದ್ದಾರೆ? ಹೊರಡು. ಶುಭವಾಗಲಿ." ಎಂದು ಹುರಿದುಂಬಿಸಿದ.

"ಈ ಬಣ್ಣ ಮಾಸುವುದಿಲ್ಲವೇ ಮುದುಕಪ್ಪಾ ?"

"ಇಲ್ಲ. ಮೂರು ವರ್ಷದವರೆಗೂ ಉಳಿಯುತ್ತದೆ. ಯೋಚಿಸಬೇಡ."

ಮುದುಕನಿಗೆ ವಂದಿಸಿ ಅಲ್ಲಿಂದ ಹೊರಟೆ.

ಸ್ವಯಂವರ ಮಂಟಪದ ಹತ್ತಿರ ಹೋದಾಗ ಎಲ್ಲವೂ ಸ್ತಬ್ಧವಾಗಿತ್ತು. ದ್ವಾರಪಾಲಕರು ಕೈಯ ಕೋಲಮೇಲೆ ಭಾರಹಾಕಿ ಒರಗಿ ನಿಂತಿದ್ದರು. ಅವರ ಕಡೆಗೆ ನೋಡಿಯೂ ನೋಡದವರಂತೆ ಒಳಕ್ಕೆ ಹೊರಟೆ. ಅವರೂ ತಡೆಯಲಿಲ್ಲ.

ಮಹಾದ್ವಾರದಿಂದ ಒಳಕ್ಕೆ ಹೋದೊಡನೆ ಎದುರಿಗೇ ದೊಡ್ಡದೊಂದು ಪಟಾಂಗಣವಿತ್ತು. ಅದರ ಸುತ್ತಲೂ ಎತ್ತರವಾದ ಪೌಳಿ. ಪೌಳಿಗೆ ಹೊಂದಿಯೆ ಕಾಲುವೆಯೊಂದು ನೀರು ತುಂಬಿ ಹರಿಯುತ್ತಿತ್ತು. ಅದರ ದಂಡೆಗುಂಟಲೂ ನಾನಾ ಬಗೆಯ ಹೂಗಿಡಗಳು ಸಾಲಾಗಿ ನಿಂತಿದ್ದವು.

ಅಲ್ಲಲ್ಲಿಗೆ ಲತಾಮಂಟಪಗಳು ಹೂತು ನಿಂತಿದ್ದವು. ಪಚ್ಚಗಂಬಳಿ ಹಾಸಿದಂತೆ ಅಲ್ಲಲ್ಲಿಗೆ ಚೌಕು ಹಸಿರು ಹುಲ್ಲ ಮಡಿಗಳು.

ಪಟಾಂಗಣದ ಮಧ್ಯದಲ್ಲಿ ಮಹಾ ಮಂಟಪವಿತ್ತು. ರಾಜವೈಭವವೆಲ್ಲ ಅಲ್ಲಿ ಸೂರೆಗೊಂಡಿತ್ತು. ಕಣ್ಣು ಎಲ್ಲ ಕಡೆಗೂ ಹರಿದಾಡಿತು ಕೂಸಿನಂತೆ; ಎಲ್ಲವನ್ನೂ ಮುಟ್ಟಮುಟ್ಟಿ ನೋಡಬೇಕೆಂದು ಹಂಬಲಿಸಿತು.

ಜನ ಕಿಕ್ಕಿರಿದು ತುಂಬಿತ್ತು. ವ್ಯವಸ್ಥೆ ಅಚ್ಚುಕಟ್ಟಾಗಿತ್ತು. ಕುಳಿತುಕೊಂಡದ್ದರಲ್ಲಿಯೂ ಒಂದು ಯೋಜನೆಯಿತ್ತು.

ಮಂಟಪದಲ್ಲಿ ಒಮ್ಮೆಲೆ ಎದ್ದುಕಾಣುವುದು ಎತ್ತರದಲ್ಲಿದ್ದ ಮಹಾರಾಜರ ರತ್ನಖಚಿತ ಸಿಂಹಾಸನ. ಅದರ ಎಡಕ್ಕೂ ಬಲಕ್ಕೂ ಒಂದೊಂದು ಅಷ್ಟೆ ಸುಂದರವಾದ ರಾಜಪೀಠಗಳು. ಒಂದು ಮಹಾರಾಣಿಗಾಗಿ, ಇನ್ನೊಂದು ರಾಜಕುಮಾರಿಗಾಗಿ. ಆ ಸಿಂಹಾಸನದ ಹಿಂದೆ ಅಂತಃಪುರದವರಿಗಾಗಿ ಬೇರೆ ವ್ಯವಸ್ಥೆಯಿತ್ತು.

ನಾನು ಹೋಗಿ ಎಲ್ಲಿಯೂ ಕುಳಿತುಕೊಳ್ಳದೆ ಅಲ್ಲಿಯೆ ಒಂದು ಲತಾಮಂಟಪದ ಬಳಿಯಲ್ಲಿ ಎಲ್ಲರ ಕಣ್ಣು ತಪ್ಪಿಸಿ ನಿಂತುಕೊಂಡೆ.

ಕಹಳೆ ಕೊಂಬುಗಳಾದವು. ವಂದಿಮಾಗಧರ ಸ್ತುತಿಪಾಠವಾಯಿತು. ಮಹಾರಾಜರು ಗಾಂಭೀರ್ಯದಿಂದ ಬಂದು ಸಿಂಹಾಸನ ಮೇಲೆ ಕುಳಿತರು. ಬಂದಿದ್ದ ರಾಜ ಮಹಾರಾಜರೆಲ್ಲ ಎದ್ದು ಮರ್ಯಾದೆ ತೋರಿಸಿದರು. ಮಹಾರಾಜರು ಮಂಟಪದಲ್ಲೆಲ್ಲ ಒಮ್ಮೆ ಕಣ್ಣು ಓಡಾಡಿಸಿ, ಆಮೇಲೆ ರಾಜಪುರೋಹಿತರ ಕಡೆಗೆ ಹೊರಳಿ ನೋಡಿದರು. ರಾಜಪುರೋಹಿತರು ರಾಜಕುಮಾರಿಯನ್ನು ಕರೆತಂದು ಸಿಂಹಾಸನದ ಹತ್ತಿರ ಅತ್ಯಂತ ಮೋಹಕವಾಗಿ ನಿರ್ಮಿಸಿದ ಕಮಲಸ್ತಂಭದ ಮೇಲೆ ನಿಲ್ಲಿಸಿದರು. ಮಹಾರಾಜರು ಎದ್ದು ರಾಜಕುಮಾರಿಯ ಕೈಯಲ್ಲಿ ರತ್ನಮಾಲೆಯನ್ನು ಕೊಟ್ಟು "ನಮ್ಮ ಈ ರಾಜಕುಮಾರಿಯು ಅಂತಃಪ್ರೇರಣೆಯಿಂದ ಯಾರನ್ನು ವರಿಸುವಳೊ ಅವರಿಗೆ ಅವಳನ್ನೂ ನನ್ನ ರಾಜ್ಯವನ್ನು ಧಾರೆಯೆರೆದು ಕೊಡುತ್ತೇನೆಂದು ಸೂರ್ಯಚಂದ್ರರ ಸಾಕ್ಷಿಯಾಗಿ ಪ್ರತಿಜ್ಞಾಪೂರ್ವಕ ತಿಳಿಸುತ್ತೇನೆ. ಇದಕ್ಕೆ ತಪ್ಪಿ ನಡೆದಲ್ಲಿ ನನ್ನ ವಂಶದವರೆಲ್ಲರೂ ರವರವ ನರಕದಲ್ಲಿ ಬೀಳಲಿ." ಎಂದು ಗಂಭೀರಧ್ವನಿಯಲ್ಲಿ ಮೂರು ಸಲ ಉಚ್ಚರಿಸಿದರು. ಜನರ ದೃಷ್ಟಿಯೆಲ್ಲ ರಾಜಕುಮಾರಿಯ

ಮೇಲೆ ಹೊರಳಿತು. ರಾಜಕುಮಾರಿಯು ನಿಂತಲ್ಲಿಂದಲೆ ಒಮ್ಮೆ ಎಲ್ಲ ಕಡೆಗೂ ದೃಷ್ಟಿಯನ್ನು ಹರಿಯಿಸಿ, ಕಮಲಸ್ತಂಭದಿಂದ ಕೆಳಗಿಳಿದು ರಾಜಕುಮಾರರಿದ್ದ ಭಾಗದ ಕಡೆಗೆ ಹೊರಟಳು. ಪುರೋಹಿತರು ಮುಂದೆ ಮುಂದೆ ನಡೆದರು. ರಾಜಕುಮಾರಿಯು ಹತ್ತಿರ ಬಂದಾಗ ತಮಗೇ ಮಾಲೆ ಹಾಕುವಳೆಂದು ಕುಲು ಕುಲು ನಗುತ್ತಿದ್ದ ರಾಜಮುಖಗಳು, ಆಕೆ ದಾಟಿ ಮುಂದೆ ಹೋದೊಡನೆ ನಿಸ್ತೇಜವಾಗಿ ಜೋಲುಬೀಳುತ್ತಿದ್ದವು. ಆಸೆ ನಿರಾಸೆಗಳು ಎಲ್ಲರ ಮನಸ್ಸಿನಲ್ಲಿಯೂ ಗುದುಮುರಿಗೆ ಹಾಕುತ್ತಿದ್ದವು. ರಾಜಕುಮಾರಿಯು ಯಾವುದೊ ಒಂದು ಗುರ್ತನ್ನು ಹುಡುಕುವುದಕ್ಕಾಗಿಯೊ ಏನೊ ಎಂಬಂತೆ ಎಲ್ಲರ ಮುಖಗಳನ್ನೂ ಸ್ವಲ್ಪ ದಿಟ್ಟಿಸಿ ನೋಡಿ ನೋಡಿ ಮುಂದೆ ಸಾಗುತ್ತಿದ್ದಳು. ರಾಜಕುಮಾರರಿದ್ದ ಭಾಗ ಮುಗಿಯಿತು. ಕುಮಾರಿ ಅಲ್ಲಿಂದ ಪ್ರೇಕ್ಷಕರ ವಿಭಾಗದಲ್ಲಿ ಹೊಕ್ಕಳು. ಮಂಟಪದಲ್ಲಿ ಆಗಲೆ ಗಲಿಬಿಲಿ ಸುರುವಾಯಿತು. ರಾಜಕುಮಾರರು ತಮಗೆ ತಿಳಿಯದೆಯೆ ಮೀಸೆಯ ಮೇಲೆ ಕೈ ಹಾಕಿದರು. ಮಹಾರಾಜರ ಮುಖವು ಗಾಬರಿಗೊಂಡರೂ ಗಂಭೀರವಾಗಿತ್ತು. ಎಲ್ಲರ ಕಣ್ಣುಗಳೂ ಆತುರದಿಂದ ಕುಮಾರಿಯ ಬೆನ್ನು ಹತ್ತಿದವು.

ಕುಮಾರಿಯು ಆ ಮಹಾಮಂಟಪವನ್ನೆ ಬಿಟ್ಟು ಹೊರಗೆ ಬಂದಳು. ಮಂಟಪದಲ್ಲಿ ಗಡಿಬಿಡಿ ಎದ್ದಿತು. ಅಂತಃಪುರದವರು ಹೌಹಾರಿದರು. ಮಹಾರಾಜರು ಹುಬ್ಬುಗಂಟಿಕ್ಕಿದರು. ಮಹಾರಾಣಿಯವರು ಕುಲದೇವತೆಯನ್ನು ನೆನೆನೆನೆದು ಕೈಮುಗಿಯುತ್ತಿದ್ದರು. ಎಲ್ಲರ ಕಣ್ಣುಗಳೂ ಕುಮಾರಿಯನ್ನು ಬಿಟ್ಟು ನನ್ನ ಕಡೆಗೆ ಹೊರಳಿದವು. ಕುಮಾರಿಯು ಅತ್ತಿತ್ತ ನೋಡುತ್ತ ಸಾವಕಾಶವಾಗಿ ಲತಾಮಂಟಪದ ಹತ್ತಿರ ನಿಂತಿದ್ದ ನನ್ನ ಕಡೆಗೇ ಬಂದಳು. ದಿಟ್ಟಿಸಿ ನನ್ನ ಮುಖವನ್ನೂ ನೋಡಿ, ಮುಗುಳುನಗೆ ನಕ್ಕು, ಕೈಯಲ್ಲಿಯ ರತ್ನಹಾರವನ್ನು ನನ್ನ ಕೊರಳಿಗೆ ಹಾಕಿದಳು.

ಕೂಡಲೆ ಮಂಟಪದಲ್ಲೆಲ್ಲ ಗೊಂದಲವೆದ್ದಿತು. "ಇದು ನಿಯಮಬಾಹ್ಯವಾಯಿತು. ಅವನು ಕ್ಷತ್ರಿಯನಲ್ಲ." ಎಂದು ಕೂಗಾಡಿದರು ಕೆಲರು. 'ಮುದುಕ!' ಎಂದು ಮೂಗುಮುರಿದರು ಅಂತಃಪುರದವರು. ಕುಲಹೀನವಾಯಿತೆಂದು ವೃದ್ಧರು ಗೊಣಗಿದರು. ರಾಜದಂಡಾಳುಗಳು ಮಹಾರಾಜರ ಅಜ್ಞೆಗಾಗಿ ಅವರ ಮುಖವನ್ನೆ ನೋಡುತ್ತಿದ್ದರು. "ಯುದ್ಧ! ಯುದ್ಧ!"

ಎಂದು ಕೂಗಾಡಿದರು ಕೆಲ ರಾಜಕುಮಾರರು; ಸೊಂಟದಲ್ಲಿಯ ಕತ್ತಿಯನ್ನೆ ಹಿರಿದರು ಕೆಲವರು. ಮಹಾರಾಜರೂ ಇದನ್ನೆಲ್ಲ ನೋಡಿ ಗೊಂದಲಗೆಟ್ಟರು. ವೃದ್ಧಸಚಿವನೊಬ್ಬ ಬಂದು ಮಹಾರಾಜರ ಕಿವಿಯಲ್ಲಿ ಏನೋ ಹೇಳಿ ಹೋದ. ಮಹಾರಾಜರ ಮನಸ್ಸು ಒಮ್ಮೆಲೆ ಸ್ಥಿಮಿತಕ್ಕೆ ಬಂದು ಮುಖದ ಮೇಲೆ ಮುಗುಳನಗೆ ಮೂಡಿತು. ಎದ್ದು ನಿಂತು ಸಾವಧಾನದಿಂದ, "ಈಗ ಆದದ್ದು ನಿಯಮಬಾಹ್ಯವಲ್ಲ. ದೈವಕ್ಕೆ ಪ್ರತಿಯಾಗಿ ನಡೆಯುವುದು ಯಾರಿಗೂ ಹಿತಕರವಲ್ಲ. ಕೊಟ್ಟ ಮಾತನ್ನಂತೂ ತಿರುಗಿಸುವುದು ಸಾಧ್ಯವೇ ಇಲ್ಲ. ವಿವಾಹಮಹೋತ್ಸವ ನೆರವೇರಲಿ." ಎಂಬರ್ಥದ ಮಾತಾಡಿ ಪ್ರಸಂಗವನ್ನು ಹಿಡಿತಕ್ಕೆ ತಂದರು.

* * * *

ರಾಜವೈಭವದಿಂದ ವಿವಾಹಮಹೋತ್ಸವವಾಯಿತು. ನೂರು ವರ್ಷಗಳು ನೂರು ಕ್ಷಣಗಳಂತೆ ಕಳೆದವು. ಆಗಲೆ 'ಮುದುಕಪ್ಪರಾಜ'ನೆಂದು ಹೆಸರು ಪಡೆದಿದ್ದೆ. ಈ ಹೊತ್ತು ನನ್ನ 'ಜರಾತ್ಯಾಗ'ದಿನ. ಮುಪ್ಪಿನ ರೂಪ ಹೋಗಿ ಯೌವನ ಮರಳಿ ಬರುವುದಿತ್ತು.

ಅಂತಃಪುರದ ಶಯ್ಯಾಗಾರದಲ್ಲಿದ್ದೆ. ಹಂಸತೂಲಿಕಾ ಮಂಚದ ಮೇಲೆ ಒರಗಿಕೊಂಡಿದ್ದೆ. ನಡೆದುಹೋದ ಸಂಗತಿಗಳು ಮನಸ್ಸಿನ ಪಟದ ಮೇಲೆ ಚಿತ್ರಚಿತ್ರವಾಗಿ ಮೂಡಿಹೋಗುತ್ತಿದ್ದವು. ನನ್ನಷ್ಟಕ್ಕೆ ನಾನೇ ನಕ್ಕೆ.

ಅದೇ ಹೊತ್ತಿಗೆ ಅರಸಿ ಮೆಲ್ಲಗೆ ಬಂದು ಎದುರಿಗೆ ನಿಂತಳು. ಅವಳನ್ನು ನೋಡಿದೊಡನೆ ಏನೋ ಕೇಳಬೇಕೆಂದುಕೊಂಡಿದ್ದ ಮಾತು ನೆನಪಿಗೆ ಬಂತು. ರಾಜ್ಯಭಾರ ನಡೆಸುವುದರಲ್ಲಿ, ಯುದ್ಧಮಾಡುವುದರಲ್ಲಿ ಈ ವರೆಗೂ ಕೇಳುವ ಪ್ರಸಂಗ ಬಂದಿರಲಿಲ್ಲ.

"ರಾಜಕುಮಾರಿಯವರು ಎಲ್ಲರನ್ನೂ ಬಿಟ್ಟು ಮುದುಕನಾದ ನನ್ನನ್ನೆ ಅರಸಿದ್ದೇಕೆ, ಹೇಳಬಹುದೇ?"

"ನೀವು ಮುದುಕರಲ್ಲ ಎಂದು."

"ಅದು ಹೇಗೆ? ಈ ರೂಪ ನೋಡಿದರೆ......."

"ಅದೆಲ್ಲ ಹೇಳಬೇಡಿರಿ. ನನಗೆಲ್ಲ ತಿಳಿದಿತ್ತು."

"ಏನು?"

"ನನ್ನ ಬಾಯಿಂದ ಕೇಳಬೇಕೆಂದು ನಿಮಗೆ ಆಸೆಯೇ? ಪಾಪ, ನಿಮಗೇನೂ ಗೊತ್ತೇ ಇರಲಿಕ್ಕಿಲ್ಲ ಅಲ್ಲವೆ ?"

"ಅದೇನು ? ನನಗೇನೂ ನಿಜವಾಗಿ ಗೊತ್ತಿಲ್ಲ. ಹೇಳು."

"ನಿಜವೇ ?"

"ನಿಜ."

"ಮುದುಕ ಹೇಳಿದ, ಗೊತ್ತಿದೆಯೆಂದು."

"ಯಾವ ಮುದುಕ ?"

"ಇದೇನಿದು ? ಅವನದೂ ಗೊತ್ತಿಲ್ಲವೇ ? ಅಶ್ವಶಿಕ್ಷಕನಾಗಿ ಇಲ್ಲಿ ಬಂದಿದ್ದ. ನಿಮ್ಮ ಎಲ್ಲಾ ಗುರುತು ಹೇಳಿದ. ಹೋಗುವಾಗ ಗುರುತು ಕೊಟ್ಟು ಹೋದ."

"ನನಗೊಂದೂ ತಿಳಿಯದಾಗಿದೆ. ಏನು ಗುರುತು ಕೊಟ್ಟ ?"

"ನಿಮ್ಮ ಹಣೆಯ ಮೇಲಿನ ತಿಲಕದ್ದು."

"ಓಹೊ! ಆ ಮುದುಕನದು ಗೊತ್ತು. ಚೆನ್ನಾಗಿ ಗೊತ್ತು. ನನಗೀ ರೂಪ ಕೊಟ್ಟವನು ಅವನೇ. ಅವನು ಅಶ್ವಶಿಕ್ಷಕನಾಗಿದ್ದನೊ ?"

"ಹೌದು, ಕೆಲದಿನ ಇದ್ದ."

"ಸ್ವಯಂವರ ಮಂಟಪದಲ್ಲಿ ನೀನು ಮಾಲೆಯನ್ನು ಹಿಡಿದು ಹೊರಟಾಗ ಎಲ್ಲಿ ಮೋಸಹೋಗುವಿಯೋ ಎಂದು ಭಯಗೊಂಡಿದ್ದೆ."

"ಮೋಸವೇನಿತ್ತು ?"

"ಅಲ್ಲಿ ನೆರೆದಿದ್ದ ರಾಜಕುಮಾರರೆಲ್ಲ ಆ ಮುದುಕನ ಕೈವಾಡದ ರೂಪಗಳೇ ಆಗಿದ್ದರು ; ಅದಕ್ಕೇ ಹೆದರಿದ್ದೆ."

"ಸರಿಯಾಗಿಯೆ ಸಿಕ್ಕಿತಲ್ಲ ಅವರಿಗೆ ಸ್ವಾಗತ? ಓ, ಒಳ್ಳೆ ನೆನಪಾಯಿತು, ತಡೆಯಿರಿ. ತರುತ್ತೇನೆ." ಎಂದು ಒಳಗೆ ಹೋಗಿ ರೇಶಿಮೆಯ ವಸ್ತ್ರದಲ್ಲಿ ಕಟ್ಟಿದ ಒಂದು ಗಂಟನ್ನು ತಾನೆ ತಂದಳು. ಬಿಚ್ಚಿ ಒಳಗಿನಿಂದ ಒಂದು ಚಿತ್ರ ತೆಗೆದುಕೊಟ್ಟಳು. ನೋಡಿದೆ. ನನ್ನದೇ! ಆ ಮುದುಕನ ಮನೆಯಲ್ಲಿ ನೋಡಿದ್ದು. ಆಶ್ಚರ್ಯವಾಯಿತು. "ಎಲ್ಲಿಂದ ಬಂತಿದು ?" ಎಂದು ಕೇಳಿದೆ.

"ನಿಮಗೆ ಈ ರೂಪ ಕೊಟ್ಟವರ ಮನೆಯಿಂದ ಬಂತು." ಎಂದು

ನನ್ನ ಮುಖ ನೋಡಿದಳು.

ನಾನು ಕೆಲ ಹೊತ್ತು ಸುಮ್ಮನೆ ಕುಳಿತೆ. ಹಿಂದೆ ನಡೆದು ಹೋದದ್ದೆಲ್ಲ ಮನಸ್ಸಿನಲ್ಲಿ ಮತ್ತೆ ವೇಗವಾಗಿ ಹಾಯ್ದು ಹೋಯಿತು. ಇದೆಲ್ಲ ದೈವಲೀಲೆಯೆಂದು ನಂಬಿದ್ದ ನನಗೆ ಈಗ ಆ ಲೀಲೆಯ ಹಿಂದೆ ನಿಶ್ಚಲ ನಿಶ್ಚಯದ ಕೈಯೊಂದು ಇರಲೇಬೇಕೆಂದು ಮನವರಿಕೆಯಾಯಿತು.

“ಹಾಗಾದರೆ ಆ ಮುದುಕನನ್ನು ನೋಡಿದ್ದೀಯಲ್ಲವೆ?”

“ನೋಡದೆ ಏನು? ಅಶ್ವಶಿಕ್ಷಕನಾಗಿ ಇಲ್ಲಿಗೆ ಮೊದಲು ಬಂದ. ಅರಮನೆಯ ಚಿತ್ರಶಾಲೆಗೆ ಚಿತ್ರಗಳನ್ನೂ ಬರೆದುಕೊಟ್ಟ. ನನ್ನನ್ನೂ ಒಮ್ಮೆ ತಾನಿದ್ದಲ್ಲಿಗೆ ಕರೆದೊಯ್ದು ಎಲ್ಲಾ ತೋರಿಸಿದ. ಮುದುಕನ ಮಾತು ಎಂದರೆ ಜೇನು ಇದ್ದಂತೆ. ಮನಸ್ಸಂತೂ ಬೆಳದಿಂಗಳಿದ್ದ ಹಾಗೆ. ಅರಮನೆಯಲ್ಲಿಯೆ ಇಟ್ಟುಕೊಳ್ಳಬೇಕೆಂದು ಎಷ್ಟು ಪ್ರಯತ್ನಿಸಿದರೂ ಆತ ನಿಲ್ಲಲಿಲ್ಲ. ನಿಮಗೆ ಈ ರೂಪ ಕೊಟ್ಟವನು ಅವನೇ ಅಲ್ಲವೇ?”

“ಹೌದು. ಅವನನ್ನೀಗ ಕಾಣಬೇಕೆನಿಸುತ್ತದೆ. ಕರೆಯಿಸುತ್ತೇನೆ.”

“ನಾನಾಗಲೆ ಅಲ್ಲಿಗೆ ರಾಜದೂತರನ್ನು ಕಳಿಸಿ ನೋಡಿಸಿದೆ. ಮುದುಕ ಅಂದಿನ ದಿನವೆ ತುಂಬಿದ ಮನೆಯನ್ನು ಹಾಗೇ ಬಿಟ್ಟು ಹೊರಟು ಹೋಗಿದ್ದಾನಂತೆ.”

“ವಿಚಿತ್ರ ಮನುಷ್ಯ!”

“ನಾಳೆಯೆ ನಮ್ಮ ಆ ಮಹಾರಾಜರ ಪುಣ್ಯದಿನ ಅಲ್ಲವೇ?”

“ಹೌದು?”

ಅದೇ ಹೊತ್ತಿಗೆ ದಾಸಿಯೊಬ್ಬಳು ಅಂಜುತ್ತಂಜುತ್ತ ಬಂದು “ಜೀಯ!” ಎಂದಳು. “ಏನು?” ಎಂದೆ. ದಾಸಿಯು ತಾನು ತಂದಿದ್ದ ಭಾರವನ್ನು ನನ್ನ ಹತ್ತಿರವೆ ಇಟ್ಟು ಹಿಂದೆ ಸರಿದು ಮರೆಯಾದಳು. ನಾನು ಎದ್ದು ಹೋಗಿ ನೋಡಿದೆ. ಸುಂದರವಾದ ಚೌಕಟ್ಟಿನ ನಾಲ್ಕು ಚಿತ್ರಗಳಿದ್ದವು. ಅವಕ್ಕಿದ್ದ ಆವರ್ಣವನ್ನು ಸರಿಸಿ ನೋಡಿದೆ. ಆ ಮುದುಕನ ಮನೆಯಲ್ಲಿ ನೋಡಿದ್ದ ಚಿತ್ರಗಳೇ. ಮೊದಲನೆಯದು ರಾಜಕುಮಾರಿಯದು; ಎರಡನೆಯದು ರಾಜನದು; ಮೂರನೆಯದು ಮಹಾರಾಣಿಯದು; ನಾಲ್ಕನೆಯದು ರಾಜವೇಷದಲ್ಲಿದ್ದ ನನ್ನದು. ದಾಸಿಯನ್ನು ಕರೆದು ಕೇಳಿದೆ “ಯಾರು ತಂದಿ

ದ್ದಾರೆ?" ಎಂದು.

"ಯಾರೋ ಒಬ್ಬರು ಮುದುಕರು ಬಂದಿದ್ದಾರೆ ಜೀಯ. ಸಂಗಡ ಇನ್ನೊಬ್ಬರಿದ್ದಾರೆ."

"ಇನ್ನೂ ಇದ್ದಾರೆಯೆ?"

"ಇದ್ದಾರೆ ಜೀಯ."

"ಕೂಡಲೆ ಇಲ್ಲಿಗೆ ಕರೆದುಕೊಂಡು ಬಾ. ಬೇಗ ಹೋಗು."

ದಾಸಿಯು ಕರೆತರಲು ಹೊರಟು ಹೋದಳು.

ಇತ್ತ ಅರಸಿಯನ್ನು ಕರೆದು ಅವನ್ನೆಲ್ಲ ತೋರಿಸಿದೆ. ಮುದುಕ ಬಂದಿರುವದನ್ನೂ ತಿಳಿಸಿದೆ. ಅವಳಿಗೂ ಸಂತೋಷವಾಯಿತು. ಇಬ್ಬರೂ ಅವರಿಗಾಗಿ ಆತುರದಿಂದ ಕಾದು ನಿಂತೆವು.

ದಾಸಿಯು ಬಂದು "ಬಂದಿದ್ದಾರೆ ಜೀಯ" ಎಂದು ತಿಳಿಸಿ ಮರೆಯಾಗಿ ನಿಂತಳು.

ಮುದುಕ ಸಾವಕಾಶವಾಗಿ ನಡೆಯುತ್ತ ಬಂದ. ಅವನ ಹಿಂದೆಯೆ ಯಾರೊ ಒಬ್ಬರು ಮುಸುಕು ಹಾಕಿಕೊಂಡು ಬರುತ್ತಿದ್ದರು. ರಾಜಗಾಂಭೀರ್ಯವನ್ನೂ ಮರೆತು ಧಾವಿಸಿ ಮುಂದೆ ಹೋಗಿ ಮುದುಕನ ಪಾದಕ್ಕೆ ಬಿದ್ದೆ. ಮುದುಕ ಕೈಹಿಡಿದು ಎತ್ತಿದ. ಒಂದು ಕ್ಷಣ ಇಬ್ಬರೂ ಭಾವನಿರ್ಭರರಾಗಿದ್ದೆವು. "ಮುದುಕಪ್ಪಾ, ಇಷ್ಟು ದಿನ ಎಲ್ಲಿ ಹೋಗಿದ್ದಿ?" ಎಂದು ನಾನೇ ಮಾತಿಗೆ ಮೊದಲು ಮಾಡಿದೆ.

ಮುದುಕ ಉತ್ತರವನ್ನೇನೂ ಕೊಡಲಿಲ್ಲ. ಮುಸುಕಿನಲ್ಲಿದ್ದ ವ್ಯಕ್ತಿಯ ಕಡೆಗೆ ತಿರುಗಿ ತಾನೇ ಆ ಮುಸುಕನ್ನು ತೆರೆದ. ಗುಡಿಸಲಲ್ಲಿ ನನ್ನನ್ನು ಜೋಪಾನ ಮಾಡಿದ ತಾಯಿ! ಹೋಗಿ ಅವಳ ಪಾದದ ಮೇಲೂ ತಲೆಯನ್ನಿಟ್ಟೆ. ತಲೆ ಮುಟ್ಟಿ ಆಶೀರ್ವದಿಸಿದಳು. ನನ್ನ ಅರಸಿಗೂ ನಮಸ್ಕರಿಸಲು ಸೂಚಿಸಿದೆ. ಚಕಿತಳಾಗಿದ್ದ ಅವಳೂ ನಮಸ್ಕಾರ ಮಾಡಿ ಆಶೀರ್ವಾದ ಪಡೆದಳು.

ಮೌನವೇ ಒಬ್ಬರೊಬ್ಬರಿಗೆ ಅವರವರ ಹೃದಯವನ್ನು ಬಿಚ್ಚಿ ತೋರಿಸಿತು. ಕಣ್ಣುಗಳು ಅರ್ಥಮಾಡಿಕೊಂಡವು.

ಮುದುಕ ತನ್ನ ಸಂಗಡ ಬಂದಿದ್ದವಳ ಕಡೆಗೆ ಸೂಚಕವಾಗಿ ನೋಡಿದ.

ಕೂಡಲೆ ಇಬ್ಬರೂ ತಮ್ಮ ವೇಷವನ್ನು ತೆಗೆದೊಗೆದರು. ಒಳಗೆ ನೋಡಿದರೆ ರಾಜವೇಷ! ಇದೀಗ ಕಳಿಸಿದ ಚಿತ್ರಗಳಲ್ಲಿಯ ವ್ಯಕ್ತಿಗಳೇ ಎದ್ದು ಬಂದು ಎದುರಿಗೆ ನಿಂತಂತಾಯಿತು. ಮಾತೆ ಹೊರಡಲಿಲ್ಲ. ಇದನ್ನು ನೋಡಿ ಮುದುಕನೇ ಮಾತು ಪ್ರಾರಂಭಿಸಿದ. "ಗಾಬರಿಯಾಗಬೇಡ. ಇಂದೇ ನಿನ್ನ ಮುಪ್ಪುಹೋಗುವ ದಿನ. ನನ್ನ ಬಯಕೆ ಕೈಗೂಡಿದಂತಾಯಿತು. ಬದುಕಿದ್ದು ಸಾರ್ಥಕವಾಯಿತು. ಕಳೆದದ್ದನ್ನು ತಿರುಗಿ ತಂದುಕೊಟ್ಟಂತಾಯಿತು. ಇನ್ನು ನೀವು ಸುಖವಾಗಿರಿ. ನಾವು ಹೊರಡುತ್ತೇವೆ. ನನ್ನ ಕೈ ಹಿಡಿದು ನಿನ್ನ ತಾಯಿ ಉಂಡ ದುಃಖ ಅಷ್ಟಿಷ್ಟಲ್ಲ. ಈಗ ಅವಳಿಗೂ ಶಾಂತಿ ಬಂದಿದೆ."

"ತಂದೆ!....ತಾಯಿ!.... ನಾನು ರಾಜಕುಮಾರ!..." ಎಂದು ನನ್ನ ಮನಸ್ಸು ವಿಸ್ಮಯಕ್ಕೊಳಗಾಯಿತು. "ಇನ್ನೆಲ್ಲಿಗೆ ಹೋಗುವಿರಿ? ಇಲ್ಲಿಯೆ ನಿಂತುಬಿಡಿರಿ. ಈ ರಾಜ್ಯ, ಈ ವೈಭವ ಎಲ್ಲ ನಿಮ್ಮದೇ. ಹೋಗಬೇಡಿರಿ." ಎಂದು ಬೇಡಿಕೊಂಡೆ.

"ಸಾಧ್ಯವಿಲ್ಲ. ನಮ್ಮ ರಾಜ್ಯ ಇದಲ್ಲ. ಬೇರೆ ಇದೆ. ನೀವೇ ಇಲ್ಲಿ ಇರಬೇಕಾದವರು. (ತನ್ನ ರಾಣಿಗೆ) ಹುಂ, ಹೊರಡು ಇನ್ನು. ನಿಲ್ಲುವಹಾಗಿಲ್ಲ. ತಡವಾಯಿತು." ಎಂದು ನಿಶ್ಚಯದ ದನಿಯಲ್ಲಿ ಉತ್ತರ ಕೊಟ್ಟು ಹೊರಟೇ ನಿಂತರು, 'ತಾಯಿ!' ಎಂದು ಕೂಗಿದೆ. ತಾಯಿ ಇತ್ತ ಕಡೆ ಮುಖ ಹೊರಳಿಸಿದಳು. ಮುದುಕ ಅವಳಿಗೆ "ಹೆಚ್ಚು ನಿಲ್ಲಬೇಡ. ನಿಂತರೆ ಕಾಲು ಕುಸಿದಾವು. ಮಾತು ತಡವರಿಸೀತು. ಮೋಹ ಕಣ್ಣನ್ನು ಕುರುಡಾಗಿಸೀತು. ನಾವಿನ್ನೂ ನಡೆಯುವ ದಾರಿ ಬಹಳ ದೂರದ ವರೆಗೆ ಇದೆ. ನಡೆ, ಹೊರಡು." ಎಂದು ಗದ್ದರಿಸಿದ. ತಾಯಿಯ ಕಣ್ಣೊಳಗಿಂದ ಹನಿಗಳು ಒಂದೇಸಮನೆ ಉದುರುತ್ತಿದ್ದವು. ಮುಖ ಅತ್ತ ತಿರುಗಿಸಿಕೊಂಡು ಮುದುಕನ ಬೆನ್ನು ಹತ್ತಿದಳು.

ಮುದುಕ ನಾಲ್ಕು ಹೆಜ್ಜೆ ಹೋದವನು ತಿರುಗಿ ಬಂದು "ಕುಮಾರ, ನಿನ್ನ ಕಾರಾಗೃಹದಲ್ಲಿ ಒಬ್ಬಳಿದ್ದಾಳೆ. ಅವಳು ನಿನಗಾಗಿ ಅಲ್ಲಿ ಬಿದ್ದಿದ್ದಾಳೆ. ಅವಳನ್ನು ಕರೆಯಿಸಿಕೊ. ಅವಳೇ ನಿನ್ನ ತಾಯಿಯೆಂದು ತಿಳಿದುಕೊ. ಇದರಲ್ಲಿ ತಪ್ಪಿ ನಡೆಯಬೇಡ." ಎಂದು ನನಗೆ ಹೇಳಿ ನಾವು ನೋಡುತ್ತ ನಿಂತಿರುವಂತೆಯೆ ಇಬ್ಬರೂ ಹೊರಟು ಹೋದರು.

ಮನಸ್ಸಿನ ಉದ್ವೇಗವನ್ನು ತಡೆಯಲಾರದೆ ಅಲ್ಲಿಯೆ ತೂಗು-ಮಂಚದ ಮೇಲೆ ಒರಗಿದೆ. ನನ್ನರಸಿಯೂ ಇದನ್ನೆಲ್ಲ ನೋಡಿ ಗೊಂದಲಗೆಟ್ಟು ತನ್ನ ತಲೆಯನ್ನು ನನ್ನ ಎದೆಯ ಮೇಲಿಟ್ಟು ಒರಗಿದಳು. (೨೨-೯-೧೯೨೭)

ಎದೆಯ ಮೇಲೆ ಭಾರ ಬಿದ್ದಂತಾಗಿ ಎಚ್ಚರವಾಯಿತು. ಕಣ್ಣು ತೆರೆದು ನೋಡಿದೆ. ಎರಡೂ ಕೈಗಳು ಎದೆಯ ಮೇಲೆ ಇದ್ದವು. ಆಗಳೆ ಬೆಳಗಾಗುವದರಲ್ಲಿತ್ತು. ನಾನು ವಿಶ್ರಾಂತಿಗಾಗಿ ಆಶ್ರಯಿಸಿದ್ದ ಮಾವಿನ ಮರ ಈಗ ಮೋಟುಮರವಾಗಿದ್ದರೂ ಹಕ್ಕಿಗಳಿಗೆಲ್ಲ ಇನ್ನೂ ಆಶ್ರಯಸ್ಥಾನ ವಾಗಿತ್ತು. ಚಿಲಿಪಿಲಿ ಶಬ್ದ ಪ್ರಾರಂಭವಾಗಿತ್ತು. ನದಿಯ ನೀರು ಶುಭ್ರ ವಾಗಿ ಪ್ರಶಾಂತವಾಗಿ ಹರಿಯುತ್ತಿತ್ತು. ಆಕಾಶ ಕ್ಷಣಕ್ಷಣಕ್ಕೊಂದು ಹೊಸ ಬಣ್ಣ, ಹೊಸರೂಪ ತಳೆಯುತ್ತಿತ್ತು.

ಅಲ್ಲಿಂದೆದ್ದೆ. ನದಿಯಲ್ಲಿಳಿದು ಮುಖ ತೊಳೆದುಕೊಂಡೆ. ನಂತರ ನನ್ನನ್ನು ಇಲ್ಲಿಯವರೆಗೆ ತಂದು ಮುಟ್ಟಿಸಿದ ಕಾಲುದಾರಿಯನ್ನೆ ಹಿಡಿದು ಮುಂದೆ ಹೊರಟೆ. ರಾತ್ರಿ ಕಂಡ ಕನಸು ಮನಸ್ಸನ್ನು ಕದಡಿತ್ತು. ಆದರೂ ಕೈಕೊಂಡ ಕಾರ್ಯ ಪೂರ್ತಿಯಾಗುವದೆಂಬ ಭರವಸೆಯನ್ನೂ ಹುಟ್ಟಿಸಿತ್ತು.

## ಬಿಡುಗಡೆ

ನಾನು ಹಿಡಿದ ಕಾಲುದಾರಿ ನದಿಯ ದಂಡೆಯಗುಂಟ ಪೂರ್ವಾಭಿ ಮುಖವಾಗಿ ಹೊರಟಿತ್ತು.

ಇನ್ನೂ ಚುಮುಚುಮು ನಸುಕು ಆಗ. ಅಂಗೈ ಗೆರೆಗಳೂ ಸ್ಪಷ್ಟವಾಗಿ ಕಾಣದಷ್ಟು ಮಬ್ಬುಗತ್ತಲೆಯಿತ್ತು. ಸುತ್ತುಮುತ್ತಲಿನ ಸೃಷ್ಟಿಯೆಲ್ಲ ಇನ್ನೂ ನಿದ್ರೆಯಲ್ಲಿರುವಂತೆಯೆ ಕಂಡಿತು.

ಏನೇನೊ ವಿಚಾರಗಳು ತಲೆಯಲ್ಲಿ ತಿರುಗುತ್ತಿದ್ದವು. ಅವುಗಳ ಸೆಳವಿಗೆ ಸಿಕ್ಕು ನನ್ನ ನಡಿಗೆಯೂ ಒಮ್ಮೊಮ್ಮೆ ಕುಂಠಿತವಾಗುತ್ತಿತ್ತು; ಒಮ್ಮೊಮ್ಮೆ ಯಂತೂ ನಿಂತೇಬಿಡುತ್ತಿತ್ತು. ಅಲ್ಲಿಂದ ವಿಚಾರದ ಮತ್ತೊಂದು ಸುಳಿಗೆ ಸಿಕ್ಕಾಗ ಮತ್ತೆ ಪ್ರಾರಂಭವಾಗಿ ಜೋರಾಗುತ್ತಿತ್ತು.

ಇದೇ ಕ್ರಮದಿಂದ ಎಷ್ಟೊತ್ತು ನಡೆದೆನೊ ಗೊತ್ತಿಲ್ಲ. ಕಣ್ಣೆತ್ತಿ ನೋಡಿದಾಗ ಒಂದು ಗುಡಿಯ ಭವ್ಯ ಗೋಪುರದೆದುರಿಗೆ ಮಾತ್ರ ಬಂದು ನಿಂತಿದ್ದೆ.

ಅದರ ಮಹಾದ್ವಾರವಿನ್ನೂ ತೆರೆದಿರಲಿಲ್ಲ. ದಿಡ್ಡಿಯ ಬಾಗಿಲಿನಿಂದ ಒಳಗೆ ಹೋದೆ. ದೊಡ್ಡದೊಂದು ಪ್ರಾಕಾರ. ಮಧ್ಯದಲ್ಲಿ ಗುಡಿ. ಗುಡಿಯ ಮುಂದೆ ಸಭಾಮಂಟಪ. ಆ ಮಂಟಪದ ಎದುರಿಗೇ ದ್ವೀಪಸ್ತಂಭ.

ನಾನು ಒಳಗೆ ಹೋದಾಗ ಯಾರ ಸದ್ದೂ ಇರಲಿಲ್ಲ. ನೇರವಾಗಿ ದೇವರಿದ್ದಲ್ಲಿ ಹೋಗುವ ಮೊದಲು ಒಂದು ಪ್ರದಕ್ಷಿಣೆ ಹಾಕಬೇಕೆಂದು ಹೊರಟೆ. ಪ್ರದಕ್ಷಿಣೆ ಮುಗಿಸಿ ದೇವರ ಗುಡಿಯಲ್ಲಿ ಹೊಕ್ಕೆ. ಗರ್ಭಗುಡಿಯ ಕತ್ತಲೆಯಲ್ಲಿ ಮಲಗಿದ ಅತಿ ದೊಡ್ಡ ಮೂರ್ತಿಯೊಂದು ಅಲ್ಲಿದ್ದ ಎಣ್ಣೆದೀಪದ ಮಂದ ಬೆಳಕಿನಲ್ಲಿ ಕತ್ತಲೆಗೂ ಕಪ್ಪಾಗಿ ಕಂಡಿತು. ಭಕ್ತಿಗಿಂತ ಭಯದಿಂದಲೆ ಕೈ ಮುಗಿದೆ. ಅಷ್ಟರಲ್ಲಿ ಯಾರೊ ಹೆಣ್ಣುಮಕ್ಕಳು ಗರ್ಭಗುಡಿಯಲ್ಲಿ ಆ ಮೂರ್ತಿಯ ಹಿಂದೆ ಅಳುತ್ತಿರುವ ಧ್ವನಿ ಕೇಳಿಸಿತು. ಧಾವಿಸಿ ಒಳಕ್ಕೆ ಹೋದೆ. ಏನೂ ಕಾಣುವಂತಿರಲಿಲ್ಲ. ಧ್ವನಿ ಬರುವ ದಿಕ್ಕನ್ನೆ ಗುರುತಿಸಿ ಆ ಕಡೆ ಸರಿಯ ಹತ್ತಿದೆ. ಮೂರ್ತಿಯ ಹಿಂಬದಿಗೆ ಹೋಗುವಷ್ಟರಲ್ಲಿ ಮೂವರು ಟೊಣಪರು ಹಿಂಬದಿಯಿಂದಲೇ ಬಂದು ನನ್ನ ಮೇಲೆ ಬಿದ್ದರು. ಗುದ್ದಾಟ ಪ್ರಾರಂಭ ವಾಯಿತು. ಇಬ್ಬರನ್ನು ನೆಲಕ್ಕೆ ಕೆಡಹಿದ್ದೆ. ಅಷ್ಟರಲ್ಲಿ ಮೂರನೆಯವ ಬಂದು ನನ್ನ ಜೋಲಿ ತಪ್ಪಿಸಿ ಕೆಳಗುರುಳಿಸಿದ. ಬಿದ್ದವರೂ ಎದ್ದು ನನ್ನ ಮೇಲೆ ಬಿದ್ದರು. ಅದೇ ಹೊತ್ತಿಗೆ ಮಹಾದ್ವಾರ ತೆರೆದ ಸಪ್ಪಳಾಯಿತು. ನನ್ನನ್ನು ಅಲ್ಲಿಯೇ ಬಿಟ್ಟು ಮೂವರೂ ಓಡಿಹೋದರು.

ಸ್ವಲ್ಪ ಹೊತ್ತಾದ ಮೇಲೆ ತಡವರಿಸುತ್ತ ಎದ್ದೆ. ಕುಂಟುತ್ತ ಅತ್ತ ಇತ್ತ ಸರಿದಾಡಿ ನೋಡಿದೆ. ಯಾರೂ ಕಾಣಿಸಲಿಲ್ಲ. ಅಳುವ ಧ್ವನಿಯೂ ಮಾಯವಾಗಿತ್ತು.

ಅಲ್ಲಿಂದ ಹೊರಬಿದ್ದು ಹೊರಟು ನದಿಯ ದಂಡೆಗುಂಟ ನಡೆದೆ. ಅರ್ಧ ಮೈಲಿನಷ್ಟು ಹೋದ ಮೇಲೆ ಅಲ್ಲಿ ನದಿಯು ಹೆಚ್ಚು ವಿಸ್ತಾರವಾಗಿತ್ತು. ದಂಡೆಯ ಮೇಲೆ ಒಂದು ಸಣ್ಣ ಗುಡಿಯಿತ್ತು. ಆ ಗುಡಿಯಿಂದ ನದಿಯ ನೀರಿನ ವರೆಗೂ ಮೆಟ್ಟಲುಗಳಿದ್ದವು. ನೀರಿನ ಹತ್ತಿರದ ಒಂದು ಮೆಟ್ಟಲಿನ ಮೇಲೆ ಒಂದು ಸ್ತ್ರೀವ್ಯಕ್ತಿ ಕುಳಿತಂತೆ ಕಂಡಿತು. 'ಅವಳೇ ಇವಳಿರಬಹುದೆ?' ಎಂದುಕೊಂಡೆ. ಅವಳ ಲಕ್ಷ್ಯವೆಲ್ಲ ನದಿಯ ನೀರ ಕಡೆಗೇ ಇತ್ತು. ಅಂತೇ ನಾನು ಬಂದಿದ್ದು ಅವಳಿಗೆ ಗೊತ್ತಾಗಲಿಲ್ಲ. ಸ್ವಲ್ಪ ಹೊತ್ತು ಹಾಗೇ ನೋಡುತ್ತ ನಿಂತುಕೊಂಡೆ. ಅಷ್ಟರಲ್ಲಿ ಅವಳು ಒಮ್ಮೆಲೆ ಎದ್ದು ನಿಂತಳು. ಸೆರಗನ್ನು ಟೊಂಕಕ್ಕೆ ಕಟ್ಟಿದಳು. ಆಕಾಶದ ಕಡೆಗೊಮ್ಮೆ ನೋಡಿ ಕೈ ಮುಗಿದಳು. ಅವಳಿನ್ನೇನು ಮಾಡಬಹುದೆಂಬುದು ನನಗೆ ಹೊಳೆಯಿತು. ಸಾವಕಾಶವಾಗಿ ಒಂದೆರಡು ಮಾರಿನ ಅಳತೆಯಲ್ಲಿ ಹೋಗಿ ನಿಂತೆ. ಅವಳು ನದಿಯಲ್ಲಿ ಧುಮುಕುವದಕ್ಕೆ ಮುಂದಾದಳು. ಇನ್ನು ಧುಮುಕುವವಳು; ಅಷ್ಟರಲ್ಲಿ "ಹಾಂ! ಅಲ್ಲದು! ಬೇಡ!" ಎಂದು ಕೂಗಿದೆ. ಬೆದರಿ ಗಕ್ಕನೆ ಹಿಂತಿರುಗಿ ನೋಡಿದಳು. ನಾನೂ ನೋಡಿದೆ. ಮತ್ತೆರಡು ಮೆಟ್ಟಲು ಇಳಿದು ಹೋಗಿ ಅವಳು ನಿಂತ ಮೆಟ್ಟಲ ಮೇಲೆಯೆ ಅವಳಿಗೆದುರಾಗಿ ನಿಂತೆ. ಉದ್ವೇಗದ ಅತಿರೇಕದಿಂದ ಅವಳು ನಡುಗುತ್ತಿದ್ದಳು. ನನ್ನನ್ನು ನೋಡಿ ಸ್ವಲ್ಪ ಮುಖ ಕೆಳಗೆ ಹಾಕಿದಳು. ಆದರೂ ದೃಷ್ಟಿ ನನ್ನ ಕಡೆಗೇ ಇತ್ತು.

"ತಾಯಿ, ಯಾರು ನೀವು? ಅಂತಹದೇನು ಬಂದಿದೆ ನಿಮಗೆ ಪ್ರಾಣ ಕೊಡುವುದಕ್ಕೆ?" ಎಂದು ಕೇಳಿದೆ.

"ನನಗಿನ್ನು ಬದುಕಿಲ್ಲ. ನಾನಾಗಲೇ ಸತ್ತಿದ್ದೇನೆ." ಎನ್ನುವಾಗ ಕಣ್ಣು ಮಿಂಚಿದವು.

"ಹಾಗೆಂದರೆ ಹೇಗೆ? ಇದ್ದೀರಲ್ಲ?"

"ಈ ಇದ್ದದ್ದು ಬದುಕಲ್ಲ; ಅದು ಸಾವು. ದೇಹಕ್ಕೆ ಪ್ರಾಣ ಇದ್ದಂತೆ ಬದುಕಿಗೆ ಶೀಲವೇ ಪ್ರಾಣ. ಪ್ರಾಣಪ್ರತಿಷ್ಠಾಪನೆಯಾದ ಮೂರ್ತಿಗೆ ಯಾವ ಅನಾಚಾರದ ಸ್ಪರ್ಶವೇ ಆಗಲಿ ಅದು ಪೂಜೆಗೆ ಅನರ್ಹವಾಗುತ್ತದೆ."

ಅವಳ ಮಾತಿಗೆ ಅಂತಃಕರಣ ಒಪ್ಪಿತು. ಅವಳ ಸುಸಂಸ್ಕಾರದ ತಿಳಿವಿಗೆ ತಲೆ ಬಾಗಿತು. ಆದರೂ ಮಾತು ಮುಂದರಿಸಿದೆ:

"ಪ್ರಾಯಶ್ಚಿತ್ತದಿಂದ ಮತ್ತೆ ಅದನ್ನು ಪಡೆಯಲಿಕ್ಕೆ ಬರುವುದಿಲ್ಲವೇ?"

"ಹೌದು; ಬರುತ್ತದೆ. ನಾನೀಗ ನಡಿಸಿದ್ದೇ ಅದು, ಪ್ರಾಯಶ್ಚಿತ್ತ."

"ಆತ್ಮಹತ್ಯ ಪ್ರಾಯಶ್ಚಿತ್ತವಲ್ಲ. ಅದು, ಮಹಾಪಾಪ."

"ಆತ್ಮಹತ್ಯ ಅಲ್ಲ ಇದು, ಆತ್ಮತ್ಯಾಗ, ಶೀಲಗೆಟ್ಟ ಸಮಾಜಕ್ಕಾಗಿ."

"ತಾಯಿ, ಸೋತೆ; ನಿಮ್ಮನ್ನು ಸಮಾಧಾನಗೊಳಿಸುವಷ್ಟು ಶಕ್ತಿ ನನ್ನಲ್ಲಿಲ್ಲ. ಆದರೂ...." ಎಂದು ಮಾತು ಅರ್ಧಕ್ಕೇ ನಿಂತಿತು. ಯಾರೋ ಹಿಂದಿನಿಂದ ಬಂದು ಒಮ್ಮೆಲೆ ನನ್ನ ಬಾಯಿ ಮುಚ್ಚಿದ್ದರಿಂದ. ಇನ್ನಿಬ್ಬರು ನನ್ನನ್ನು ಅಮುಕಿ ಹಿಡಿದರು. ಮತ್ತೊಬ್ಬ ಕೈಯಲ್ಲಿಯ ಹಗ್ಗದಿಂದ ನನ್ನನ್ನು ಬಿಗಿದು ನಿಲ್ಲಿಸಿ ಮೇಲ್ಗಡೆ ನೋಡಿದ. ಅಶ್ವಾರೋಹಿಯಾದ ಮುದುಕನೊಬ್ಬ ಅಲ್ಲಿ ನಿಂತಿದ್ದ. ನನ್ನನ್ನು ತನ್ನ ಹತ್ತಿರ ತರಲು ಸನ್ನೆಯಿಂದ ತಿಳಿಸಿದ. ರಾಜದೂತರು ನನ್ನನ್ನು ಒಯ್ದು ಅವನೆದುರಿಗೆ ನಿಲ್ಲಿಸಿದರು.

ಅಷ್ಟರಲ್ಲಿ ಆ ತರುಣಿಯನ್ನು ಮೇಣೆಯಲ್ಲಿ ಕೂಡಿಸಿ ದಂಡಾಳುಗಳ ಸಂರಕ್ಷಣೆಯಲ್ಲಿ ರಾಜಧಾನಿಗೆ ಕಳಿಸಲಾಯಿತು.

ಮುದುಕ ನನ್ನನ್ನು "ಉಳಿದವರೆಲ್ಲಿ?" ಎಂದು ಕೇಳಿದ.

"ಉಳಿದವರೆಂದರೆ ಯಾರು?"

"ನಿನ್ನ ಜೊತೆಗಿದ್ದವರು."

"ನನ್ನ ಜೊತೆಗೇ?"

"ಹುಂ, ನಿನ್ನ ಜೊತೆಗೇ."

"ನನ್ನ ಜೊತೆಗೆ ಯಾರೂ ಇರಲಿಲ್ಲ– ಆ ತಾಯಿಯನ್ನು ಬಿಟ್ಟು."

"ಸುಳ್ಳು ಹೇಳುತ್ತೀಯಾ?"

"ಸುಳ್ಳುದಾರಿಯಲ್ಲ ನನ್ನದು."

"ಹಂ, ತಡೆ. ಎಲ್ಲಾ ಹೊರಬಿದ್ದಿದೆ, ನಿಮ್ಮ ಕಾರಸ್ಥಾನ. ನಮ್ಮ ಇಡೀ ರಾಜ್ಯ ನುಂಗಬೇಕೆಂದು ಬಾಯಿಹಾಕಿದ್ದೀರಲ್ಲವೇ? ಹೇಳು, ನಿನ್ನ ಸಂಗಡಿಗರೆಲ್ಲಿರುವರು? ವ್ಯರ್ಥ ಸಾವಿಗೆ ತುತ್ತಾಗಬೇಡ."

"ಸಾವಿಗಂಜಿ ಹೊರಟವನಲ್ಲ ನಾನು; ರಾಜ್ಯಕ್ಕೆ ಬಾಯಿಬಿಟ್ಟು ಹೊರಟವನಲ್ಲ ನಾನು; ರಾಜ್ಯಬಿಟ್ಟು ಹೊರಟವನು. ಅಲ್ಲಿ ಇದ್ದ ಅವರು ಓಡಿಹೋದರು."

" ಯಾರವರು ? "

" ಯಾರೋ. ನನಗೆ ಗೊತ್ತಿಲ್ಲ."

" ಸರಿ. ಒಯ್ಯಿರಿ ಇವನನ್ನು, ನೆಲಮನೆಗೆ." ಎಂದು ರಾಜದೂತರಿಗೆ ತಿಳಿಸಿ ಕುದುರೆಯನ್ನು ತಿರುಗಿಸಿಕೊಂಡು ಹೊರಟುಹೋದ.

ರಾಜದೂತರು ನನ್ನನ್ನು ತಮ್ಮ ಮನಸ್ಸಿಗೆ ಬಂದಂತೆ ಹಿಂಸಿಸುತ್ತ ಒಯ್ದು ನೆಲೆಮನೆಯಲ್ಲಿ ದಬ್ಬಿ ಬಾಗಿಲು ಮುಚ್ಚಿಕೊಂಡು ಹೊರಟು ಹೋದರು.

ಹಗಲು ರಾತ್ರಿ ಎರಡೂ ಒಂದೆಯಾಗಿದ್ದ ಆ ನೆಲೆಮನೆಯ ಕತ್ತಲೆ ಯಲ್ಲಿ ಒಂದು ಮೂಲೆ ನನಗೆ ಆಶ್ರಯ ಕೊಟ್ಟಿತ್ತು. ಶೂನ್ಯಮನಸ್ಕನಾಗಿ ಎಷ್ಟೋ ಹೊತ್ತು ಕಳೆದೆ.

ಹಸಿವೆಯೆನಿಸಿತು. ಗಂಟಲು ಒಣಗಿತು. ಏನು ಮಾಡುವುದಕ್ಕೂ ಉಪಾಯವಿಲ್ಲದೆ ಕುಳಿತಲ್ಲಿಯೆ ನೆಲದ ಮೇಲೆ ಒರಗಿದೆ. ದೇಹದ ಶ್ರಮ ಪರಿಹಾರಕ್ಕೆ ನಿದ್ರೆ ಸಹಾಯಕವಾಯಿತು.

ಕನಸಿನಲ್ಲಿ ಮುಸುಕು ಹಾಕಿದ ತರುಣಿಯೊಬ್ಬಳು ತನ್ನೊಂದು ಕೈಯಲ್ಲಿ ಬೆಳಕನ್ನು ಹಿಡಿದುಕೊಂಡು ಇನ್ನೊಂದು ಕೈಯನ್ನು ಒಬ್ಬ ಮುಪ್ಪಿನ ಮುದು ಕಿಯ ಕೈಗೆ ಆಧಾರವಾಗಿ ಕೊಟ್ಟು ಕತ್ತಲೆಯಲ್ಲಿದ್ದ ನನ್ನ ಕಡೆಗೇ ಬಂದಳು. ಮಲಗಿದ್ದ ನನ್ನ ಮುಖಕ್ಕೇ ಬೆಳಕು ಹಿಡಿದು " ಇವರೇ ಅವರು." ಎಂದು ಮುದುಕಿಗೆ ಹೇಳಿದಳು. ಮುದುಕಿ ಮುಂದೆ ಬಂದು ನನ್ನ ತಲೆ ಮುಟ್ಟಿ " ಮಗೂ, ಇದನ್ನೇನು ಮಾಡಿದೆ? ಇಲ್ಲಿ ನೀನು, ಅಲ್ಲಿ ನಾವು. ಅವರೂ ಹಾಸಿಗೆ ಹಿಡಿದು ಮಲಗಿದ್ದಾರೆ, ನೀನು ಹೊರಟು ಬಂದಾಗಿನಿಂದ. ಅದಿನ್ನೂ ಕೂಸು. ರಾಜ್ಯ ನೋಡುವವರು ಯಾರು? ನಾನೂ ತೀರ ಹಣ್ಣಾಗಿ ದ್ದೇನೆ. ಇವಳಂತೂ ದಿನದಿನಕ್ಕೆ ಹೂ ಬಾಡಿದಂತೆ ಬಾಡುತ್ತಿದ್ದಾಳೆ. ನಮ್ಮೆಲ್ಲರ ಗತಿಯೇನು? ಆ ಕೂಸನ್ನಾದರೂ ನೆನೆದು ಬರಬಾರದೇ? ಇಲ್ಲಿ ಈ ಕತ್ತಲೆಯಲ್ಲಿದ್ದರೆ ಏನು ಬಂತು? ದಿವ್ಯಾಗ್ನಿ ಇಲ್ಲಿದೆಯೇ? ಇದೆಲ್ಲ ಯಾವ ದೇವರ ತೃಪ್ತಿಗೆ? ಏಳು ತಿರುಗಿ ನಡೆ. ನಿನ್ನ ರಾಜ್ಯವಾಳು." ಎಂದು ಕಣ್ಣೀರು ಸುರಿಸಿದಳು.

" ತಡ ಮಾಡಬೇಡಿರಿ. ಈ ಉಡುಪನ್ನು ಹಾಕಿಕೊಳ್ಳಿರಿ. ಹೊರಡಿರಿ.

ಈ ಬೆಳಕಿದೆ. ನಾನು ಹಾದಿ ತೋರಿಸುತ್ತೇನೆ. ಮಹಾರಾಣಿಯವರ ಮಾತನ್ನು ಮನ್ನಿಸಿ ಹೊರಡಿರಿ.'' ಎಂದು ಆ ತರುಣಿಯೂ ತನ್ನ ಮುಸುಕನ್ನು ಸರಿಸಿ ದೈನ್ಯದಿಂದ ಬೇಡಿಕೊಂಡಳು.

ಎದ್ದು ಕುಳಿತು ಇಬ್ಬರನ್ನೂ ದಿಟ್ಟಿಸಿ ನೋಡಿದೆ. ನನ್ನ ಉತ್ತರಕ್ಕಾಗಿ ಇಬ್ಬರೂ ಕಾಯ್ದು ನಿಂತಿದ್ದರು. ಮನಸ್ಸಿನ ಹೊಯ್ದಾಟ ಹೆಚ್ಚಾಗಿ ಕ್ಷಣ ಕಾಲ ತಲೆಹಿಡಿದುಕೊಂಡು ಸುಮ್ಮನೆ ಕುಳಿತೆ. "ಏನು, ತಾಯಿಯ ಮಾತನ್ನು ಮೀರಲೇ? ಏನು, ಹೆಂಡತಿಯ ದೈನ್ಯಸ್ಥಿತಿಯನ್ನು ಕಡೆಗಣಿಸಲೇ? ಏನು, ದಿವಾಗ್ನಿ ತರುವ ಹಂಬಲ ಬಿಟ್ಟುಬಿಡಲೇ? ಯಾವುದನ್ನು ಮಾಡಲಿ? ಯಾವುದು ಸರಿ? ಯಾವೊಂದನ್ನು ಮಾಡಿದರೂ ಕರ್ತವ್ಯಚ್ಯುತಿಯ ಆರೋಪ ನನ್ನ ಪಾಲಿಗೆ ಬಿಟ್ಟದ್ದಲ್ಲ. ಏನು ಮಾಡಲಿ? ಯಾವ ಬೆಳಕು ನನಗೆ ದಾರಿ ತೋರೀತು?" ಎಂದು ನನ್ನನ್ನು ನಾನೇ ಕೇಳಿಕೊಂಡೆ. ನನ್ನೊಳಗೇ ವಾದ-ವಿವಾದ, ಚರ್ಚೆ-ವಿಚರ್ಚೆ, ತರ್ಕ-ವಿತರ್ಕ ಎಲ್ಲಾ ನಡೆಯಿಸಿದೆ. ಏನೂ ಉತ್ತರ ಬರಲಿಲ್ಲ. ಕೊನೆಗೆ ಆ ಅಶರೀರವಾಣಿಯನ್ನೆ ನಂಬಿ "ಆಗದು. ಇಷ್ಟು ದೂರ ಬಂದ ಮೇಲೆ ನನ್ನಿಂದ ಹಿಂದಿರುಗುವುದು ಸಾಧ್ಯವಿಲ್ಲ. ನೀವು ಹೊರಡಿರಿ. ಹೆಚ್ಚು ಕಾಲ ನಿಂತು ನನ್ನನ್ನು ಇಲ್ಲದ ಮೋಹದ ಬಲೆಗೆ ನೂಕಬೇಡಿರಿ. ತಾಯೀ ಸೈರಿಸು! ಈ ನಿನ್ನ ಮಗನನ್ನು ಮನ್ನಿಸು." ಎಂದು ಹೇಳಿಬಿಟ್ಟೆ.

ನಿರಾಸೆಯಾಗಿ ತರುಣಿಯ ಕೈಯಲ್ಲಿದ್ದ ದೀಪ ಕೆಳಕ್ಕೆ ಜಾರಿ ಬಿತ್ತು. ಕತ್ತಲೆ ತುಂಬಿತು. ಅದರ ಸಪ್ಪಳಕ್ಕೆ ನನಗೆ ಎಚ್ಚರಾಯಿತು.

ಎದ್ದು ಕುಳಿತು ಕಣ್ಣು ತೆರೆದೆ. ಮುಸುಕು ಹಾಕಿದ ಒಂದು ವ್ಯಕ್ತಿ ಬಾಗಿಲು ತೆರೆದು ಬಂದು ನನ್ನೆದುರಿಗೇ ನಿಂತಿತ್ತು. ಕೈಯಲ್ಲಿ ಬೆಳಕೂ ಇತ್ತು. ನೋಡಿ "ಯಾರು!" ಎಂದೆ.

"ಯಾರಾದರೇನು? ಮೊದಲು ಏಳಿ. ಈ ವಸ್ತ್ರ ಧರಿಸಿ. ನನ್ನ ಹಿಂದೆ ಬನ್ನಿ. ಹೆಚ್ಚಿನ ಪ್ರಶ್ನೆ ಈಗ ಕೇಳಬೇಡಿ. ಅವಕಾಶವಿಲ್ಲ. ನಿಮ್ಮ ದೇನೂ ತಪ್ಪಿಲ್ಲೆಂಬುದು ನನಗೆ ತಿಳಿದಿದೆ. ಹುಂ, ಏಳಿ.'' ಎಂದು ಆ ವ್ಯಕ್ತಿಯು ಮುಸುಕು ಸರಿಸದೆಯೇ ಮಾತನಾಡಿತು.

"ನನ್ನ ತಪ್ಪಿಲ್ಲೆಂಬುದು ನಿಮಗೆ ಗೊತ್ತಾಗಿ ಏನುಪಯೋಗ? ರಾಜ

ನಿಗೆ ತಿಳಿಯಬೇಕು. ನೀವಾರು, ಮೊದಲು ಹೇಳಿ ?"

"ಇನ್ನೂ ಗುರ್ತು ಹತ್ತಲಿಲ್ಲವೇ ?"

"ಇಲ್ಲ. ಮುಸುಕು...."

"ಆಗಲಿ. ಆದರೆ...." ಎಂದು ಮುಸುಕು ತೆಗೆದೊಗೆದು ಎದುರಿಗೆ ನಿಂತಳು. ನೋಡಲು ತೆರೆದ ಕಣ್ಣುಗಳು ತೆರೆದೇ ನಿಂತವು. 'ಅವಳೇ!' ಎಂದುಕೊಂಡಿತು ಮನಸ್ಸು. ಕೆಲ ಕ್ಷಣಗಳು ಮೌನದಲ್ಲಿ ಉರುಳಿದವು. ನಂತರ ಅವಳೆ ಕೇಳಿದಳು, "ಬರಲೊಪ್ಪುವಿರಾ ?" ಎಂದು.

"ನಾನು ಅಪರಾಧಿಯೆಂದು ಇಲ್ಲಿಡಲ್ಪಟ್ಟಿದ್ದೇನೆ. ನಾನು ಹೊರಗೆ ಬರಬೇಕಾದರೆ ರಾಜಶಾಸನವೆ ನನ್ನನ್ನು ಬಿಡುಗಡೆ ಮಾಡಬೇಕಲ್ಲವೆ? ನಿಮ್ಮ ಹತ್ತಿರ ರಾಜಾಜ್ಞೆ ಉಂಟೇ ?"

"ಇಲ್ಲ. ನನ್ನ ಸಲುವಾಗಿ ನಿಮ್ಮ ಪ್ರಾಣ ಆಹುತಿಯಾಗಬಾರದೆಂದು ಈಗ ನಿಮ್ಮನ್ನು ಬದುಕಿಸಲು ಬಂದಿದ್ದೇನೆ. ನನ್ನ ಸೇವೆಯನ್ನು ಸ್ವೀಕರಿಸಿ ನೀವು ನನ್ನನ್ನು ಕೃತಾರ್ಥಳನ್ನಾಗಿ ಮಾಡಬೇಕು."

"ಅಪರಾಧ ಸಿದ್ಧವಾಗಿದೆಯೋ ?"

"ಅದಾವುದು ತಿಳಿಯದಿದ್ದರೂ ನಾಳೆ ನಿಮ್ಮ 'ತಲೆದಂಡ' ಎಂದು ತಿಳಿಯಿತು. ಬಿಟ್ಟರೆ ಇದ್ದ ನನ್ನ ತಲೆ ದಂಡವಾದೀತೆಂದು ಭಾವಿಸಿ ಇಲ್ಲಿಗೆ ಧಾವಿಸಿ ಬಂದೆ. ಈಗಾದರೂ ಈ ವಸ್ತ್ರ ಧರಿಸಿ. ಏಳಿ."

"ಅಪರಾಧ ಸಿದ್ಧವಾಗಿ, ಅದಕ್ಕೆ 'ತಲೆದಂಡ'ದ ಶಿಕ್ಷೆಯನ್ನೂ ವಿಧಿಸಿರುವಾಗ ನಾನು ಹೀಗೆ ಹೊರಗೆ ಹೋಗುವುದು ಸರಿಯಾದೀತೇ? ಕದ್ದು ಓಡಿಹೋದಂತಲ್ಲವೆ? ಛೆ! ನನ್ನಿಂದ ಶಕ್ಯವಿಲ್ಲ. ಕ್ಷತ್ರಿಯ ಸಾವಿಗಂಜುವುದು ಮಹಾಪಾಪ."

"ಪ್ರಾಯಶ್ಚಿತ್ತದಿಂದ ಎಲ್ಲ ಪಾಪ ನಾಶವಾಗುತ್ತದೆ. ಹುಂ, ಸುಮ್ಮನೆ ಮಾತಿನಲ್ಲಿ ಹೊತ್ತುಗಳೆಯಬೇಡಿ. ಇಲ್ಲದ ತರ್ಕದ ಬೆನ್ನು ಹತ್ತಬೇಡಿ. ಈ ಪ್ರಸಂಗದಲ್ಲಿ ನೀವು ಹೀಗೆ ಮಾಡುವುದು ಸರಿಯಾದದ್ದು; ಇದರಲ್ಲಿ ತಪ್ಪಿಲ್ಲ; ನಿಮ್ಮ ಉದ್ದೇಶಸಾಧನೆಗೂ ಅಡ್ಡಿಯಾಗುವುದಿಲ್ಲ ಎಂದು ನನಗಿಸಿದ್ದರಿಂದ ನಾನು ತಮಗೆ ಕೇಳಿಕೊಳ್ಳುತ್ತಿದ್ದೇನೆ."

ನನಗೆ ಧರ್ಮಸಂಕಟಕ್ಕೇ ಬಂತು. ಅವಳಿಗೆ ಉಪದೇಶಿಸಿದ ಮಂತ್ರ

ನನಗೇ ತಿರುಗಿ ಹೊಡಿದಂತಾಗಿತ್ತು. ಕೊನೆಗೆ ಅವಳ ಮಾತಿಗೇ ಒಪ್ಪಿದೆ. ಅವಳು ತಂದಿದ್ದ ವಸ್ತ್ರಗಳನ್ನು ಧರಿಸಿದೆ; ಅವಳು ಹಿಡಿದ ಬೆಳಕನ್ನು ಹಿಂಬಾಲಿಸಿ ಹೊರಟೆ.

ಎಲ್ಲೆಲ್ಲಿಯೊ ಭೂಮಾರ್ಗದಲ್ಲಿ ಹಾಯಿಸಿ ನನ್ನನ್ನು ಊರ ಹೊರಗೆ ತಂದು ಬಿಟ್ಟು "ನಾನಿನ್ನು ತಿರುಗುತ್ತೇನೆ. ಮರೆಯಬೇಡಿ. ಇದೇ ಎದುರಿಗಿದ್ದ ಕಾಲುದಾರಿಯನ್ನು ಹಿಡಿದು ನೀವು ಹೋಗಬಹುದು. ಬೇಕಾದರೆ, ಪಟ್ಟಣದಲ್ಲಿ ಓಡಾಡಿದರೂ ಭಯವಿಲ್ಲ ಈಗ. ನಾನು ಬರುತ್ತೇನೆ." ಎಂದು ಮತ್ತೆ ನಮಸ್ಕರಿಸಿ ತಿರುಗಿದಳು. ಅವಳ ಕಣ್ಣುಗಳೊಳಗಿಂದ ಹನಿಗಳುದುರಿ ನನ್ನ ಪಾದದ ಮೇಲೆ ಬಿದ್ದವು. "ಅಷ್ಟಪುತ್ರಸೌಭಾಗ್ಯವತಿಯಾಗು" ಎಂದು ಹರಸಿ ಅಲ್ಲಿಂದ ಕಾಲು ಕಿತ್ತಿದೆ. ಅವಳೂ ಭೂಮಾರ್ಗದಲ್ಲಿ ಮರೆಯಾದಳು.

( ೧೫—೮—೧೯೨೬ )

ವೇಷ ಬದಲಾಗಿದ್ದರಿಂದ ನಿರ್ಭಯನಾಗಿ ಎಲ್ಲಿ ಬೇಕಾದಲ್ಲಿ ತಿರುಗಾಡಬಹುದಾಗಿತ್ತು. ಕೆಲಹೊತ್ತು ವಿಶ್ರಾಂತಿ ಪಡೆದು ಕಾಲುದಾರಿ ಬಿಟ್ಟು ರಾಜಧಾನಿಯ ಕಡೆಗೆ ಹೊರಟೆ.

ಬೀದಿಯಲ್ಲಿ ಜನ ಅಲ್ಲಲ್ಲಿ ಗುಂಪುಗಟ್ಟಿಕೊಂಡು ನಿಂತು ಏನನ್ನೋ ಬಹಳ ಮೆಲ್ಲಗೆ ಒಬ್ಬರೊಬ್ಬರ ಕಿವಿಯಲ್ಲಿ ಮಾತನಾಡುತ್ತಿದ್ದರು. ನಾನೂ ಸಾವಕಾಶವಾಗಿ ಹೋಗಿ ಅಂತಹದೊಂದು ಗುಂಪಿನಲ್ಲಿ ಸೇರಿಕೊಂಡು ನಿಂತೆ.

ಈ ಮಾತುಗಳು ನಡೆದಿದ್ದವು:

ಒಬ್ಬ :— ಏನೇ ಅನ್ನು, ನಮ್ಮ ರಾಜರ ದೈವ ದುರ್ದೈವ. ಅಲ್ಲಾ, ತಮ್ಮ ಕೈಯಿಂದಃ ತಮ್ಮ ಹೊಟ್ಟೀಲೆ ಹುಟ್ಟಿದ ಮಗಳ 'ತಲೆದಂಡ' ಹಾಕ್ಸಬೇಕಂದರ ಏನು ಚಮತ್ಕಾರ ಅಂತೀನಿ! ಯಾರಿಗೆ ಕೊಟ್ಟ 'ತಲೆದಂಡ' ಯಾರಿಗೆ ತಿರುಗಿತು ನೋಡಿದಿರಾ ? ಅಂತಃ ದೈವದಾಟ ಒಬ್ಬರಿಗೂ ತಿಳ್ಯಾಕಿಲ್ಲ ಅಂತೀನಿ."

ಇನ್ನೊಬ್ಬ :— ಅಲ್ಲೋ, ಇದು ಆಗಿರೋದರ ಹ್ಯಾಂಗಾಗಿರಬೇಕೂ

ಅಂತೀನಿ? ನನಗೇನೊ ಅನುಮಾನ ಬರತೈತಿ ಬಿಡು ಇದರಾಗ. ಯಾರ ದಾರ ಕೈ ಹಿಂದಿದ್ದೀತೇನು ಮತ್ತ? ಅಲ್ಲಾ, ತಪ್ಪು ಮಾಡೋವರು ಒಬ್ಬರು, 'ತಲೆದಂಡ' ಕೊಡೋವರು ಇನ್ನೊಬ್ಬರs? ಹ್ಯಾಗ ಸರಿ ಆದೀತಿದೂ ಅಂತೀನಿ?

ಮತ್ತೊಬ್ಬ :— ಅಲ್ಲಪಾ, ಹೆಣಮಗಳಂಬೋದು ಆ ಕೊಲೆಗಡಕ ರಿಗೂ ತಿಳಿದಿರಾಕಿಲ್ಲs?

ಒಬ್ಬ :— ವೇಷ ಬದಲಿದ್ದರ ಏನ್ ತಿಳೀತೈತೋ? ಅವರಾರs ಏನಂಥಾ ಚುರುಕು ಮಂದಿ? ಮಬ್ಬಗೋಳು. ಗಾಂಜಾದ ಅಮಲಿನಾಗ ಎತ್ಲಾಗ ನೋಡಿದವೋ ಏನೋ!

ಮಗದೊಬ್ಬ :— ಕೊಲೆಗಡಕನs ಒಬ್ಬಾವ ಹೇಳಿದ, ಎರಡ ದಿನದ ಹಿಂದ ನೆಲಮನ್ಯಾಗ ಒಬ್ಬನ್ನ ತಂದ ಹಾಕಿದ್ವರಲ್ಲ್ಸ ನಮ್ಮ ಮಹಾರಾಜರು, ಅವನs ಅಂತ.

ಇನ್ನೊಬ್ಬ :— ಹಾಗಾದರ ಏನೋ ಮೋಸ ಆದ್ದs ಖರೆ ಬಿಡು. ಇದರಾಗ ಆ ಮಹರಾಣೀ ತಮ್ಮಂದೇನಾದರೂ ಕೈ ಇರಲಾಕs ಬೇಕು ಬಿಡು. ಯಾಕಂದರ ಆ ಹುಡಿಗಿನ್ನ ಮಾಡಿಕೋಬೇಕೂ ಅಂತ ಬೇಕಾದಷ್ಟು ಹಗ್ಗಾ ಹಾಕಿದ ಅವನೂ, ಮಗ. ಮಹಾರಾಣಿಯವರೂ ಮತ್ತ ಒಂದೀಟು ಮೂಗೆಳದಿದ್ವರು ಅದಕ್ಕ. ಆದರ ಆಕೀನs ಮಗಳು, ಜಪ್ಪಲ್ಲಿಲ್ಲ. ಮತ್ತ ಅದನ್ನs ಡಂಕಿಟ್ಟು ಅವನs ಏನಾರೆ ಕಂತ್ರಾಟಮಾಡಿರಬೇಕು ಅಂತೀನಿ. ರಾಜ್ಯಾ ಆಳೋ ಆಶಾ ಏನು ಸಣ್ಣಪುಟ್ಟದs? ಏನ್ ಬೇಕಾದ್ದs ಮಾಡಸ್ತೈತಿ.

ಒಬ್ಬ :— ಹೌದೊ, ಹಾಗಾರ ಆ ಸಿಕ್ಕ ಕಳ್ಳ ಈ ಗದ್ದಲದಾಗ ಎತ್ಲಾಗ ತಪ್ಪಿಸಿಕೊಂಡಿರಬೇಕೂ ಅಂತೀನಿ? ಅವನs ಏನಾರs ಯಾಕ ಮಾಡಿರಬಾರದು?

ಇದೇ ಹೊತ್ತಿಗೆ ಹೊಸಬನೊಬ್ಬ ಆ ಗುಂಪಿಗೆ ಬಂದು ಸೇರಿಕೊಂಡು ಒಮ್ಮೆಲೆ "ಕೇಳೀರೇನು ಹೊಸ ಸುದ್ದಿ?" ಎಂದು ನಡುವೆಯೆ ಕೇಳಿದ. ಎಲ್ಲರೂ ಅವನ ಕಡೆ ನೋಡಹತ್ತಿದರು.

ಒಬ್ಬ :— ಏನು, ಏನದು?

**ಹೊಸಬ** :— ರಾಜಕುಮಾರಿಯುವರೆ ಸ್ವತಃ ಬರೆದಿಟ್ಟ ಪತ್ರ ಸಿಕ್ಕs ದಂತ.

**ಒಬ್ಬ** :— ಏನದಂತ?

**ಹೊಸಬ** :— ರಾಜಕುಮಾರೀ ವೈವ್ಯಾಲ ಹೋಗಿದ್ದಾ ಅಂತ ನೆಲ-ಮನ್ಯಾಗ ಹಿಡದ ತಂದು ಹಾಕಿದ್ದರಲ್ಲ, ಅವನs ಅಂತ ರಾಜಕುಮಾರಿನ್ನ ಗುಡ್ಯಾಗ ಪಾರುಮಾಡಿದವ! ರಾಜಕುಮಾರಿ ನದಿ ಬೀಳಬೇಕೂ ಅಂತ ನಿಂತಾಗ ಅವನs ಬಂದು ತಪ್ಪಿಸಿದ್ನಂತ.

**ಇನ್ನೊಬ್ಬ** :— ಹಾಗಾದರ ಇದರ ಬೇರು ದೂರ ದೂರ ಹೋಗ್ಯಾವ ಅಂದ್ಹಾಂಗಾತು. ಗುಡ್ಯಾಗ ಯಾರು ಹೋದವರು ಹಾಗಾದರ ?

**ಹೊಸಬ** :— ಮಹಾರಾಣಿಯುವರ ತಮ್ಮ ಮತ್ತು ಅವನ ಕೈಯ್ಯಾಗಿ ನವರು.

**ಇನ್ನೊಬ್ಬ** :— ಅದs ಅಂದೆ! ಬರಾಬ್ಬರಿ ಆತು ಬಿಡು ನನ್ನ ಕಾಯಾಸ. ಹುಂ, ಹೇಳು, ಮುಂದೇನಾತು ?

**ಹೊಸಬ** :— ಮುಂದೇನಾಗೋದು ? ಎಲ್ಲಾ ಮುಗದs ಹೋತು ! ಕುಮಾರಿಯುವರು 'ಇನ್ನ ಇರೋ ಹಾಂಗಿಲ್ಲ' ಅಂತ ಅಂದs ನಿಶ್ಚಯಿಸಿ ಬಿಟ್ಟರಂತ ಸರಿ. ನೆಲಮನ್ಯಾಗ ಹಾಕಿದ ಅವನ ಹತ್ತರ ತಾವs ರಾತ್ರಿ ಹೋಗಿ, ಅವಗ ಬ್ಯಾರೆ ವೇಷ ಕೊಟ್ಟು ಅವನ್ನ ಬಿಡುಗಡೆಮಾಡಿ ಬಂದು, ಅವನ ವೇಷ ತಾವs ಹಾಕ್ಕೊಂಡು ಒಳಗ ಕೂತು ತಲೆದಂಡ ಕೊಟ್ಟರು, ಆತು !

"ಪಾಪ ! ಪಾಪ ! ದುರ್ದೈವ ! ಎಲ್ಲಾ ವಿಚಿತ್ರ !" ಎಂದು ಉಸಿರು ಬಿಡುತ್ತ ಕೂಡಿದವರು ಬೇರೆ ಬೇರೆ ದಿಕ್ಕಿಗೆ ಹೊರಟು ಹೋದರು.

ನಾನೂ ದೈವ ಆಡಿದ ಈ ವಿಚಿತ್ರ ಆಟವನ್ನು ನೋಡಿ 'ಅಯ್ಯೊ !' ಎಂದುಕೊಂಡು, ಆ ತರುಣಿಯು ನನ್ನೊಡನಾಡಿದ್ದ ಮಾತುಗಳನ್ನೆಲ್ಲಾ ನೆನೆಯುತ್ತ ಬೇಸರದ ನಡಿಗೆಯಿಂದ ಮುಂದೆ ಸಾಗಿದೆ.

*   *   *   *

ರಾಜಮಾರ್ಗಗಳೆಲ್ಲ ನನ್ನನ್ನು ಕಾಲುದಾರಿಗೆ ಮುಟ್ಟಿಸಿ ಹಿಂದುಳಿದವು.

ರಾಜಸುಂದಿರಗಳು ಪ್ರಿಯ ಜನರನ್ನು ಕಳಿಸಲು ಬಂದ ಆಪ್ತರಂತೆ ನಿಂತು ನೋಡುತ್ತ ಗುರುತು ಕೊಡುತ್ತಿದ್ದವು. ಪ್ರತಿಯೊಂದು ಕ್ಷಣವೂ ನಮ್ಮ ನಡುವಿನ ಅಂತರವನ್ನು ಹೆಚ್ಚಿಸುತ್ತಿತ್ತು. ವಿವರಗಳೆಲ್ಲ ಒಂದರಲ್ಲಿ ಒಂದು ಬೆರೆತು ಮರೆಯಾದವು. ನನ್ನನ್ನೆ ತನ್ನಲ್ಲಿಟ್ಟುಕೊಂಡ ರಾಜಧಾನಿಯು ಸಣ್ಣ ದಾಗುತ್ತ ಸಣ್ಣದಾಗುತ್ತ ನನ್ನ ಕಣ್ಣಿನಾಕಾಶದಲ್ಲಿ ಒಂದು ಚಿಕ್ಕೆಯಾಗಿ ನಿಂತಿತು; ಅದರ ಸ್ಮೃತಿಚಿತ್ರ ಮಾತ್ರ ಇನ್ನೂ ಮಸುಕಾಗಿರಲಿಲ್ಲ.

ಬಾಳೆಯ ಬನಗಳು ತೆಂಗಿನ ತೋಟಗಳಿಗೆ ಒಯ್ದು ಮುಟ್ಟಿಸಿದವು; ತೆಂಗಿನ ತೋಟಗಳು ಮಾವಿನ ತೋಪುಗಳಿಗೆ ಒಯ್ದು ಮುಟ್ಟಿಸಿದವು; ಮಾವಿನ ತೋಪುಗಳು ಬಯಲಿಗೆ ತಂದು ಬಿಟ್ಟವು; ಬಯಲು ನನ್ನನ್ನು ಅಡವಿಯಲ್ಲಿ ಹೊಗಿಸಿತು.

## ಸುವರ್ಣಕಲಶ

ಮುಳ್ಳುಬಳ್ಳಿಗಳಿಂದ ಸುತ್ತುವರೆಯಲ್ಪಟ್ಟ ಎತ್ತರವಾದ ಗಿಡಗಳು ಆಕಾಶವನ್ನೂ ಮರೆಮಾಡಿದ್ದವು. ಒಮ್ಮೆ ಒಳಗೆ ಹೊಕ್ಕರಾಯಿತು ಸುಲಭ ವಾಗಿ ಹೊರಗೆ ಬರಲು ಸಾಧ್ಯವೆ ಇರಲಿಲ್ಲ.

ನನ್ನ ಕಾಲುದಾರಿಯೆ ನನಗೆ ಗತಿ ಎಂದು ನಂಬಿ ಅದರಲ್ಲಿ ಹೊರಟಿದ್ದೆ. ಅದೂ ಒಮ್ಮೊಮ್ಮೆ ನನ್ನನ್ನು ತಪ್ಪಿಸುತ್ತಿತ್ತು. ಆಗಂತೂ ಅದೃಷ್ಟವೇ ದಾರಿ ತೋರಿಸಬೇಕು. ತೋರಿಸಿತ್ತು. ಅಂತೇ ಅದನ್ನು ನಂಬಿ ಈ ದುರ್ಗಮ ಅರಣ್ಯದಲ್ಲಿ ಹೊಕ್ಕಿದ್ದೆ. ಸಾಹಸಕ್ಕೆ ಸಂಕಲ್ಪವೆ ಬೆಳಕು ಹಿಡಿದಿತ್ತು. ದಾರಿ ಸಾಗಿತ್ತು. ಹುಡುಕುವ ಕಣ್ಣುಗಳಿಂದ ಅತ್ತಿತ್ತ ನೋಡುತ್ತಿದ್ದೆ. ಇಲ್ಲಿ ಯಾದರೂ ಆ ದಿವ್ಯಾಗ್ನಿ ಸಿಕ್ಕೀತೇ ಎಂದು ಹಾತೊರೆಯುತ್ತಿದ್ದೆ. ಕಾಲಿಗೆ ತೊಡಕುತ್ತಿದ್ದ ಮುಳ್ಳುಬಳ್ಳಿಗಳನ್ನೂ ತಲೆಗೆ ತಾಗುತ್ತಿದ್ದ ಗಿಡದ ಟೊಂಗೆ ಗಳನ್ನೂ ಸಾವಕಾಶವಾಗಿ ಬಿಡಿಸಿಕೊಳ್ಳುತ್ತ ಮುಂದೆ ಮುಂದೆ ಸಾಗಿದ್ದೆ.

ರಾತ್ರಿಯಾಯಿತು. ಬೆಳದಿಂಗಳ ದಿವಸಗಳಿದ್ದರೂ ನಾನಿದ್ದಲ್ಲಿ ಮಾತ್ರ ಕತ್ತಲೆ ಕವಿದಿತ್ತು. 'ಸೂಂಯ್-ಜೀರ್-ಜಿಟ್' ಎನ್ನುವ ಶಬ್ದ ಭಯಕ್ಕೆ ಸಹಕಾರಿಯಾಗಿ ಬಂದಿತ್ತು. ಸಾವೇ ಬಾಯಿತೆರೆದು ಕುಳಿತಿರುವಂತೆ ನನಗೆನಿಸಿತು. ಆದರೂ ಆ ಅಗ್ನಿಯನ್ನು ಹುಡುಕಬೇಕೆಂಬ ಸಂಕಲ್ಪ ನನ್ನನ್ನು ಮುಂದೂಡುತ್ತಿತ್ತು. ನೂರು ಹೆಜ್ಜೆ ಹೋಗಿರಬೇಕು, ಅಷ್ಟರಲ್ಲಿ ನನ್ನ ಹತ್ತಿರವೇ ಒಂದು ಸಿಂಹಗರ್ಜನೆಯಾಯಿತು. ಕೇಳಿ ಎದೆ ನಡುಗಿತು. ಗಾಬರಿಯಾಗಿ ಅತ್ತಿತ್ತ ನೋಡಿದೆ. ಏನೂ ಕಾಣಲಿಲ್ಲ. ಒಂದು ಕ್ಷಣಕಾಲ ನಿಂತಲ್ಲಿಯೆ ಕಣ್ಣುಮುಚ್ಚಿ ನಿಂತೆ. ಆಗ ನನ್ನ ಮನಸ್ಸಿನ ಪಟದ ಮೇಲೆ ನಾನು ಅರಮನೆ ಬಿಟ್ಟು ಹೊರಟಾಗಿನ ನನ್ನ ತಾಯಿಯ ಕರುಣಚಿತ್ರ, ಅಲ್ಲಿಯೇ ಬಾಯಿಬಿಚ್ಚಿ ಮಾತನಾಡಲಿಕ್ಕಿಲ್ಲದೆ ಮುದುಡಿಕೊಂಡು ಕದ್ದು ನನ್ನನ್ನೇ ನೋಡುತ್ತ ನಿಂತಿದ್ದ ನನ್ನ ಅರಸಿಯ ಚಿತ್ರ, ಇದಾವುದನ್ನೂ ಅರಿಯದ ತನ್ನಲ್ಲಿಯೆ ತಲ್ಲೀನವಾಗಿದ್ದ ನನ್ನ ಮಗುವಿನ ಮುಗ್ಧ ಮುಖಚಿತ್ರ, ಕಾಲಿಗೆ ತೊಡಕುತ್ತಿದ್ದ ಇವರೆಲ್ಲರ ಆಶೆಯ ಬಳ್ಳಿಯನ್ನೂ ತುಳಿದು ಅದೃಷ್ಟದ ಬೆನ್ನು ಹತ್ತಿದ ನನ್ನ ಚಿತ್ರ, ಇವೆಲ್ಲ ಒಂದೊಂದಾಗಿ ಹಾಯ್ದು ಹೋದವು. ಮನಸ್ಸು ಮತ್ತೆ ಅಧೀರವಾಯಿತು. "ನಾನೇಕೆ ಬಂದೆ? ತಿರುಗಿ ಹೋಗಬಾರದೇಕೆ?" ಎಂದು ಚಿತ್ತ ಚಂಚಲಗೊಂಡಿತು. ಆಷ್ಟೊತ್ತಿಗೆ ಮತ್ತೊಮ್ಮೆ ಗುಡುಗಿತು. ಅದನ್ನು ಕೇಳಿ ನನ್ನ ಶಕ್ತಿಯೆಲ್ಲ ಉಡುಗಿಹೋದಂತಾಯಿತು. ಚಿಟ್ಟನೆ ಚೀರಿದೆ, ಕಣ್ಣುಮುಚ್ಚಿದೆ, ನಿಂತಲ್ಲಿಯೆ ಕುಸಿಬಿದ್ದೆ.

ತಿರುಗಿ ಕಣ್ಣುತೆರೆದಾಗ ಆಗಲೆ ಮೂಡಲು ಕೆಂಪಾಗಿತ್ತು. ಪಕ್ಷಿಗಳು ಹಾರಾಡುತ್ತಿದ್ದವು. ತಂಗಾಳಿ ಬೀಸುತ್ತಿತ್ತು. ಚೇತರಿಸಿಕೊಂಡು ಮೇಲಕ್ಕೆದ್ದು ಸಾವಕಾಶವಾಗಿ ಮುಂದೆ ಸಾಗಿದೆ. ಎಷ್ಟೋ ಹೊತ್ತು ನಡೆದ ನಂತರ ಆ ಅರಣ್ಯ ಮುಗಿದು ಬಯಲೊಂದು ಬಂತು. ಬಯಲಲ್ಲಿ ನಿಂತು ನೋಡಿದರೆ ಎದುರಿಗೇ ಉತ್ತರಾಭಿಮುಖವಾಗಿ ಒಂದು ನದಿ ಹರಿಯುತ್ತಿತ್ತು. ನದಿಯ ದಂಡೆಯ ಮೇಲೆ ಒಂದೇ ಒಂದು ಮಾವಿನಮರವಿತ್ತು. ಚಿಗಿತಿತ್ತು. ಅದರಡಿಯಲ್ಲಿ ಯಾರೋ ನಿಂತಂತೆ ಕಂಡಿತು. ಮುಖ ನದಿಯ ಕಡೆಗಿತ್ತು. ಸಮೀಪ ಹೋಗಿ ನೋಡಲಾಗಿ ಸ್ತ್ರೀ ಎಂದು ಗೊತ್ತಾಯಿತು. ನೀಲಿಯ ಪತ್ತಲ ಉಟ್ಟಿದ್ದಳು. ಗುಲಾಬಿಬಣ್ಣದ ಕುಪ್ಪಸ ತೊಟ್ಟಿದ್ದಳು. ತಲೆಗೂದಲನ್ನು

ಹೆರಳು ಕಟ್ಟದೆ ಹಾಗೇ ಇಳಿಬಿಟ್ಟಿದ್ದಳು. ಎಡಗೈಯಿಂದ ಮಾವಿನ ಟೊಂಗಿ ಯೊಂದನ್ನು ಹಿಡಿದು ದೇಹದ ಭಾರವನ್ನೆಲ್ಲ ಆ ಕೈಯ ಮೇಲೇ ಹಾಕಿದ್ದಳು. ಬಲಗೈಯಲ್ಲಿ ಸುವರ್ಣಕಲಶ ಹಿಡಿದಿದ್ದಳು. ಸುಳಿಗಾಳಿಗೆ ಅವಳ ಇಳಿಬಿಟ್ಟ ಕೂದಲುಗಳು ಮಿಸುಕುತ್ತಿದ್ದವು. ಮೈ ಮೇಲಿನ ಸೆರಗು ಗಾಳಿಯ ಬೆನ್ನು ಹತ್ತಿತ್ತು. ತನ್ನ ಬಲಗಾಲಿಗೆ ಎಡಗಾಲು ಸುತ್ತಿಕೊಂಡು, ಟೊಂಗಿಯ ಆಶ್ರಯದಿಂದ ಸ್ವಲ್ಪ ಮುಂದಕ್ಕೆ ಬಾಗಿ ನದಿಯ ನೀರನ್ನೆ ದಿಟ್ಟಿಸಿ ನೋಡು ತ್ತಿದ್ದಳು. ಅವಳ ಹತ್ತಿರ ಹೋಗಿ ಅವಳನ್ನು ಮಾತನಾಡಿಸಬೇಕೆಂದು ಮನಸ್ಸು ಹರಿಯಿತು. ವಿವೇಕ ಹಿಂದೆ ಜಗ್ಗಿತು. ದೇಹ—ಹಿಂದೆ ನೋಡುತ್ತ ಮುಂದೆ ಓಡುವ ಕಳ್ಳನಂತೆ—ವಿವೇಕದ ಕಡೆಗೆ ನೋಡುತ್ತ ಮನಸಿನ ಕಡೆಗೆ ಓಡಿತು. ಮೆಲ್ಲಗೆ ಹೋಗಿ ಗಾಳಿಯ ಮೇಲೆ ತೇಲಿ ಬರುತ್ತಿದ್ದ ಅವಳ ಸೆರಗನ್ನು ಮುಟ್ಟಬೇಕೆಂದಿತು ಮನಸ್ಸು. ದೇಹ ಅನುಮಾನಿಸುತ್ತ ತಡೆದು ನಿಂತಿತು. ಆದರೆ ಇನ್ನೂ ಹತ್ತಿರ ಹೋಗಿ ನೋಡಲು ಅವಳ ಮೈಯಿಂದ ಸೂಸಿ ಹೊರಬೀಳುತ್ತಿದ್ದ ನಿರ್ಮಲ ಕಾಂತಿಗೆ ಕಣ್ಣು ಕುಕ್ಕಿದವು. ಮನವು ಮುಕ್ಕರಿಸಿತು. ವಿವೇಕ ನಕ್ಕಿತು. ಹಾಗೆಯೆ ಅವಳ ಕೈಯ್ಯಲ್ಲಿಯ ಸುವರ್ಣ ಕಲಶವನ್ನು ನೋಡುತ್ತ ನಿಂತುಬಿಟ್ಟೆ.

ತರುಣಿಯು ಚಕ್ಕನೆ ಸರಿದು ನನ್ನನ್ನು ನೋಡಿ ಮುಗುಳುನಗೆ ನಕ್ಕು, ಮಾತನಾಡದೆ ಕೈಯಲ್ಲಿಯ ಆ ಸುವರ್ಣಕಲಶವನ್ನು ನದಿಯಲ್ಲಿ ಚಲ್ಲಿಕೊಟ್ಟು ಬಿಟ್ಟಳು. ಇನ್ನೊಂದು ಕೈಯ್ಯಲ್ಲಿಯ ಮಾವಿನ ಟೊಂಗಿಯೂ ಕೊಸರಿ ಕೊಂಡು ಹೋಯಿತು. ನಾನು ಅವಳನ್ನೆ ಬಾಯಿಬಿಟ್ಟು ನೋಡುತ್ತ ನಿಂತುಕೊಂಡೆ.

ಅವಳ ಕಣ್ಣುಗಳು ಮುಳುಗುತ್ತಿರುವ ಆ ಕಲಶದ ಕಡೆಗಿದ್ದವು. ಅದನ್ನು ತಿರುಗಿ ತನಗೆ ತುಂಬಿ ತಂದುಕೊಡಬೇಕೆಂದು ಅವಳ ಕಣ್ಣುಗಳೆ ನನಗೆ ಹೇಳಿದಂತಾಯಿತು.

ಹಿಂದು ಮುಂದೆ ನೋಡದೆ ಒಮ್ಮೆಲೆ ನದಿಯಲ್ಲಿ ಹಾರಿದೆ. ಮುಳುಗಿ ತಳಮುಟ್ಟಿ ಆ ಕಲಶವನ್ನು ಕೈಯಲ್ಲಿ ಹಿಡಿದುಕೊಂಡು ಸಿಕ್ಕಿತೆಂಬ ಸಂತೋಷ ದಿಂದ ಮೇಲೆ ಬಂದು ನೋಡುವಷ್ಟರಲ್ಲಿ ಅವಳೇ ಮಾಯವಾಗಿದ್ದಳು. ಎದೆಯಲ್ಲಿ ತುಂಬಿದ್ದ ಹುಮ್ಮಸ ಹೊರಟುಹೋಯಿತು. “ಮತ್ತೆಲ್ಲಿ ಕಂಡೇನು

 

ಅವಳನ್ನು ? ” ಎಂದು ಜೀವ ಚಡಪಡಿಸಹತ್ತಿತು. ಕೈಯಲ್ಲಿ ಹಿಡಿದು ತಂದ ಕಲಶವನ್ನು ನೀರಿಂದ ಮೇಲಕ್ಕೆತ್ತಿದೆ. ಸುವರ್ಣಕಲಶ ಹೋಗಿ ಮಣ್ಣಿನ ಮಡಿಕೆಯಾಗಿತ್ತು ! ನಿರಾಸೆಯಿಂದ ಅದನ್ನು ತಿರುಗಿ ನೀರಲ್ಲಿಯೆ ಬಿಟ್ಟು ಬರಿಗೈಯಿಂದ ಮೇಲಕ್ಕೆದ್ದು ಬಂದೆ.

* * * *

ಶೂನ್ಯದೃಷ್ಟಿಯಿಂದ ಆಕಾಶದ ಕಡೆಗೆ ನೋಡುತ್ತ ಮಾವಿನಮರದ ನೆರಳಲ್ಲಿ ನಿಂತೆ. ನಿಂತಿರುವಾಗಲೆ ಆಕಾಶದಲ್ಲಿ ಮೋಡಗಳು ತುಂಬಿಕೊಂಡವು. ಬಿರುಗಾಳಿ ಬೀಸಿತು. ಗುಡುಗಲು ಪ್ರಾರಂಭಿಸಿತು. ಒಂದೆರಡು ಹನಿಗಳೂ ಉದುರಿದವು. ಇನ್ನು ಬಿರುಮಳೆ ಪ್ರಾರಂಭವಾಗುವದಿತ್ತು. ಅಷ್ಟರಲ್ಲಿ ಒಂದು ಭಯಂಕರ ಸಿಡ್ಲಿನ ಸಪ್ಪಳವಾಯಿತು. ಕೋಲ್ಮಿಂಚಿನ ಬೆಳಕು ‘ಚಕ್’ ಎಂದು ಬಿತ್ತು. ಮೇಲೆ ನೋಡಿದೆ. ಒಂದು ದಿವ್ಯತೇಜವು ಕೆಳಕ್ಕಿಳಿದು ಬರುವದು ಕಂಡಿತು. ಆದನ್ನೇ ನೋಡುತ್ತ ನಿಂತುಕೊಂಡೆ. ಆ ತೇಜವು ಮಿಂಚಿನ ವೇಗದಿಂದ ಗುಡ್ಡದಾಚೆ ಪೂರ್ವದಿಕ್ಕಿಗೆ ಓಡ ಹತ್ತಿತು. ನೆಲ–ಮುಗಿಲು ಕೂಡಿದಲ್ಲಿಯ ಅಂಚು ಹಿಡಿದು ಹಾಗೆಯೆ ಸುತ್ತು ವರಿದು ಬರಹತ್ತಿತು. ದೂರ ದೂರ ಹೋದ ಹಾಗೆಲ್ಲ ಸಣ್ಣದಾಗಿ ಕೊನೆಗೆ ಕಾಣಿಸದಂತಾಯಿತು. ಇನ್ನೂ ನನ್ನ ದೃಷ್ಟಿ ಅಲ್ಲಿಯೆ ಇತ್ತು.

ಆ ತೇಜವು ಮಾಯವಾದ ಸ್ಥಳದಿಂದ ಒಂದು ಘೂಳಿಗಂಬವು ಎದ್ದು ನಿಂತಿತು. ಕೆಲ ಹೊತ್ತಿನ ಮೇಲೆ ಅದು ಸಾವಕಾಶವಾಗಿ ಮುಂದಕ್ಕೆ ಸರಿಯ ತೊಡಗಿತು. ಎದುರಿಗಿದ್ದ ಗುಡ್ಡದ ಒಂದು ತುದಿಯಿಂದ ಹಾಯ್ದು ನದಿಯ ನೀರ ಮೇಲೆ ಬಂದೊಡನೆ ಆ ಧೂಳಿಗಂಬವು ಒಡೆಯಿತು. ಅದರಲ್ಲಿಯ ಒಂದೊಂದು ಕಣವೂ ಒಂದೊಂದು ಜ್ಯೋತಿಯಂತೆ ಹೊಳೆದವು. ಆದರೊಳಗಿಂದ ಕಾಂತಿಯೆ ಆಕಾರ ಪಡೆದು ಬಂದಂತೆ ಸುಂದರ ತರುಣಿಯೋರ್ವಳು ಹೊರಬಿದ್ದಳು. ಮೂಕನಾಗಿ ಹಾಗೇ ನೋಡುತ್ತ ನಿಂತುಕೊಂಡೆ.

ಆ ತರುಣಿಯು ನೀರ ಮೇಲೆ ಸಾವಕಾಶವಾಗಿ ನಡೆಯುತ್ತ ನಾನಿದ್ದ ಕಡೆಗೇ ಬರುವಂತೆ ಕಂಡಿತು. ದಿಟ್ಟಿಸಿ ನೋಡಿದೆ. ಇದೀಗ ಇದೇ ಮಾವಿನ ಮರದಡಿಯಲ್ಲಿ ಕಂಡ ತರುಣಿಯೇ ಅವಳು. ಮನಸ್ಸಿಗೆ ಹಿಗ್ಗಾಯಿತು. ನಿಂತಲ್ಲಿಂದಲೆ ಆದರದಿಂದ ತಲೆಬಾಗಿದೆ. ತರುಣಿ ನನ್ನೆದುರಿಗೆ ಬಂದು

ನಿಂತು "ಏನು ಬೇಕು ?" ಎಂದು ಕೇಳಿದಳು. ಮಾತುಗಳೇ ಹೊರಡ ದಾದವು. ಅವಳೇ ಪ್ರಾರಂಭಿಸಿದಳು.

"ಎಲ್ಲಿ ಆ ಸುವರ್ಣಕಲಶ ?"

"ಇ....ಲ್ಲ. ತರಲಿಲ್ಲ."

"ಸಿಗಲಿಲ್ಲವೇನು ?"

"ಸಿಕ್ಕಿತ್ತು. ಆದರೆ...."

"ಆದರೆ ಏನು ?"

"ಸಿಕ್ಕದ್ದು ಸುವರ್ಣಕಲಶವಲ್ಲ."

"ಹಾಗಾದರೇನು ?"

"ಮಣ್ಣಿನ ಮಡಿಕೆ."

"ಇರಲಿ ; ಅದಾದರೂ ಎಲ್ಲಿದೆ ?"

"ನೀರಲ್ಲಿಯೆ ಬಿಟ್ಟೆ."

ತರುಣಿಯು ನಗೆ ತಡೆಯಲಾರದೆ ಮುಖ ಹೊರಳಿಸಿದಳು.

"ತಪ್ಪಿದೆನೇ ? ನಾನು ಹುಡುಕುತ್ತಿದ್ದುದು ಅದರಲ್ಲಿತ್ತೇ ?"

"ಇರಬಹುದು."

"ಅಯ್ಯೋ ! ತಪ್ಪಾಯ್ತು. ಏನು ಮಾಡಲಿ ? ಕಣ್ಣು ಮೋಸ ಮಾಡಿತು."

"ಇನ್ನೂ ನಿನ್ನ ಕಣ್ಣುಪರೆ ಬಿಟ್ಟಿಲ್ಲ. ಅದಕ್ಕಿನ್ನೂ ಹೊಸದೃಷ್ಟಿ ಬಂದಿಲ್ಲ. ಇನ್ನೂ ಕಾಲ ಬೇಕು. ಇದು ಕೇಳು." ಎಂದು ತರುಣಿಯು ಕೊಳಲೂದಹತ್ತಿದಳು.

ಮೌನದ ನಸುಕಿನಲ್ಲಿ ಎಲ್ಲೆಲ್ಲಿಯೂ ಕಿಸುನಾದವು ತುಂಬಿತು. ನನ್ನ ಹೃದಯವುಕ್ಕಿ ಬಂತು. ಮನಸ್ಸಿನ ಮೊಗ್ಗೆಯರಳಿತು. ಅಂತರಾಳದಲ್ಲಿ ಅವಳ ಆ ಸಂಗೀತಕ್ಕೆ ಯಾರೊ ತಾಳಹಾಕಿ ಕುಣಿಯುತ್ತಿದ್ದಂತೆನಿಸಿತು. ಮೂಕನಾಗಿ ಮುಗ್ಧನಾಗಿ ಅವಳ ಆ ಕೊಳಲಗಾನವನ್ನು ಕೇಳುತ್ತ ಮೈ ಮರೆತಿದ್ದೆ.

ತರುಣಿಯು ಕೊಳಲೂದುವುದನ್ನು ನಿಲ್ಲಿಸಿ ತನ್ನ ಕೈಯಲ್ಲಿಯ ಕೊಳಲನ್ನು ನನ್ನ ಕೈಗೆ ಕೊಡುವುದಕ್ಕಾಗಿ ಕೈಯನ್ನು ಮುಂದೆ ಚಾಚಿದಳು.

ಮೂಕನಂತೆ ಸುಮ್ಮನೆ ನಿಂತುಬಿಟ್ಟೆ. ಅವಳೇ ಹೇಳಿದಳು: "ಹಿಡಿ, ತೆಗೆದುಕೊ ಕೊಳಲನ್ನು." ಎಂದು.

ಇನ್ನೂ ಸುಮ್ಮನಿದ್ದೆ.

"ಬಯಸಿದ ಈ ಕೊಳಲು ಬೇಡವೇ?"

"ನಾನು ಬಯಸಿದ್ದು ಕೊಳಲೇ? ಅಲ್ಲ."

"ಮತ್ತೇನು?"

"ಕೊಳಲಗಾನ."

"ನೀನೂ ನುಡಿಸಬಹುದಲ್ಲ?"

"ನನಗೆಲ್ಲಿ ನಿನ್ನ ಸಿರಿ; ನಿನ್ನ ಕೈಚಳಕ!"

"ಬಾ ಮುಂದೆ. ತೆರೆ ನಿನ್ನ ಎದೆಯನ್ನು. ಉಸಿರಿಡುವೆ."

"ಅದು ಹೇಗೆ ತಾಯಿಾ?"

"ಮರುಳ ನೀನು. ನಿಲ್ಲು...." ಎಂದು ತರುಣಿಯು ತನ್ನ ಕೈಯ್ಯಲ್ಲಿಯ ಕೊಳಲಿನಿಂದ ನನ್ನ ಎದೆಯನ್ನು ಮುಟ್ಟಿದಳು. ಎದೆ ಬಿಚ್ಚಿತು. ಒಳಗೆ ನಿಗಿನಿಗಿ ಕೆಂಡ ಕಂಡಿತು. ತರುಣಿ ಉಸಿರಿಟ್ಟಳು. ಅಗ್ನಿ ಪ್ರಜ್ವಲಿಸಿತು. ಕೊಳಲನ್ನು ನನ್ನ ಕೈಗೆ ಕೊಟ್ಟು "ಮಗೂ, ನೀನೂ ಹಾಡು. ಅನಂತವಾದ ವಿಶ್ವಜೀವನದ ಸತ್ಯ ಸಂಗೀತವನ್ನು ಹಾಡು." ಎಂದು ಹೇಳಿ ಮೇಲಕ್ಕೆ ಹಾರಿದಳು. ಅನಂತಾಕಾಶದಲ್ಲಿ ಅದೃಶ್ಯಳಾದಳು.

( ೨೫-೬-೧೯೨೬ )

## ಛಾಯಾಪುರುಷ

ಅವಳು ಕೊಟ್ಟ ಕೊಳಲನ್ನು ಬಾಯಿಗೆ ಹಚ್ಚಿ ಊದಬೇಕೆಂದು ಪ್ರಯತ್ನಪಟ್ಟೆ. ಸ್ವರವೇ ಹುಟ್ಟಲಿಲ್ಲ. ನಿರುತ್ಸಾಹವಾಯಿತು. ಆದರೂ ಮತ್ತೆ ಪ್ರಯತ್ನಪಟ್ಟೆ. ಸ್ವರವೇನೊ ಹುಟ್ಟಿತು. ಆದರೆ ಒಂದೇ ಸ್ವರ

ಹುಟ್ಟಿತು. ಅದನ್ನು ಕೇಳಿ ನನ್ನ ಕಿವಿಗಳೇ ಕಿವುಡಾದವು. ಸುಖವೆನಿಸ ಲಿಲ್ಲ. ಬೇಸರ ಬಂತು. ' ಉಶ್ಶ್ ' ಎಂದು ಬಡ್ಡಿಗಾತು ಕುಳಿತುಕೊಂಡೆ. ಸೂರ್ಯನು ಕೆಳಗಿಳಿದ. ಅವನ ಶಾಂತ ಕಿರಣಗಳು ನನ್ನನ್ನು ಮತ್ತೆ ಚೇತರಿಸಿದವು. ಎದ್ದು ನದಿಗೆ ಹೋಗಿ, ಸಂಧ್ಯಾಸೂರ್ಯನಿಗೆ ನಮಸ್ಕಾರ ಮಾಡಿ, ಅಲ್ಲಿಯೆ ಒಂದು ದೊಡ್ಡ ಹಾಸುಬಂಡೆಯ ಮೇಲೆ ಅಂಗಾತ ಮಲಗಿ ಆಕಾಶವನ್ನೆ ನೋಡಹತ್ತಿದೆನು. " ಕೊಳಲಿದ್ದೂ ನನಗೆ ಆನಂದಪಡ ಲಿಕ್ಕಿಲ್ಲವಲ್ಲ! " ಎಂದು ಮನಸ್ಸಿನಲ್ಲಿ ಕಳವಳ ಚಿತ್ತಸ್ವಾಸ್ಥ್ಯವನ್ನು ಕೆಡಿಸಿತ್ತು. ಐದ್ಹತ್ತು ನಿಮಿಷಗಳು ಹೀಗೇ ದಾಟುವಷ್ಟರಲ್ಲಿ ಒಂದು ಮಹಾ ಶಬ್ದವಾಯಿತು, ನನ್ನ ಹತ್ತಿರದ ಇನ್ನೊಂದು ಬಂಡೆ ಯಲ್ಲಿ. ಬಂಡೆ ಸಿಡಿಯಿತೋ ಏನೋ ಎಂದು ಗಾಬರಿಯಾಗಿ ಎದ್ದು ಕುಳಿತು ನೋಡಿದೆ. ಅದೇ ಆಗಿತ್ತು. ದೊಡ್ಡ ಬಂಡೆಯೊಂದು ಒಡೆದು ಅದರೊಳಗಿಂದ ಒಂದು ಭಯಾನಕ ಆಕೃತಿಯು ಸಾವಕಾಶವಾಗಿ ಮೇಲೆ ಮೇಲೆ ಏಳಹತ್ತಿತು. ಆ ಆಕಾರ ನೋಡಿ ಎದೆ ಝಲ್ಲೆಂದಿತು. ಕತ್ತಲೆಯೆ ರೂಪ ತೆಗೆದುಕೊಂಡು ಬಂದಂತಿತ್ತು. ಅದಕ್ಕೆ ಕಣ್ಣುಗಳಿದ್ದಿಲ್ಲ. ಉಳಿದಾವ ಅವಯವಗಳೂ ಕಾಣುತ್ತಿರಲಿಲ್ಲ. ಎಲ್ಲವು ಕರ್ರಗೆ, ಛಾಯಾ ಪುರುಷನಂತೆ. ಎರಡೂ ಕೈಗಳನ್ನು ಮೇಲಕ್ಕೆತ್ತಿಕೊಂಡು ನೆಲಮುಟ್ಟದೆ ನಡೆದು ನಾನಿದ್ದಲ್ಲಿಗೇ ಬರಹತ್ತಿತು ಆಕೃತಿ. ಅಂಜಿ ಹಿಂದೆ ಸರಿದೆ. ಆಕೃತಿಯು ಅಭಯವನ್ನು ಸೂಚಿಸಿತು. ನಿಂತಲ್ಲಿಂದಲೆ ಅದನ್ನು ದಿಟ್ಟಿಸಿ ನೋಡಿದೆ. ಕಣ್ಣುಗುಡ್ಡಿಗಳೇ ಇದ್ದಿಲ್ಲ. ಕತ್ತಲೆಯ ಗೂಡುಗಳೇ ಅವನ ಕಣ್ಣು. ಆದರೂ ಕಾಂತಿಯಿತ್ತು, ಗುಡ್ಡಿಯಿಲ್ಲದ ಗೂಡುಗಳಿಗೆ. ಎದೆಯೂ ಒಂದು ಕತ್ತಲೆಯ ಗೂಡೇ. ಹೆದರುತ್ತ ಹೆದರುತ್ತ ಕೇಳಿದೆ : " ನೀವಾರು ? " ಎಂದು.

" ನಾನು, ' ಯಾರು. ' "

" ಹೌದು, ಯಾರು ನೀವು ? "

" ಯಾರೇ ನಾನು. "

" ಅಂದರೆ ? "

" ನನ್ನ ಹೆಸರೇ ' ಯಾರು. '

" ಯಾರು ಹೆಸರಿಟ್ಟವರು ? "

" ನೀವು. "

" ನಾವೇ ? "

" ಹೌದು, ನೀವೇ ಕುರುಡರು."

" ಹಾಗಾದರೆ ಇವೆಂತಹ ಕಣ್ಣುಗಳು ? "

" ಹಣ್ಣಿದ ಕಣ್ಣುಗಳಿವು, ಮಣ್ಣುಗೂಡದ ಕಣ್ಣುಗಳು."

" ಕಾಣಿಸುವದೇ ? "

" ನಿಮಗೆ ಕಾಣಿಸವು, ನನಗೆ ಕಾಣುವ ಕಣ್ಣು. ನೀನು ಬೇಡುವ ಕಣ್ಣು."

" ಎದೆಯೇನದು ? ಕತ್ತಲೆ ತುಂಬಿದ ಆಕಾಶದಂತಿದೆಯಲ್ಲ ? "

" ಹೌದು, ನೀನು ಬಯಸಿದ್ದೆ."

" ಇದು ಯಾವ ರೂಪ ? ಶಬ್ದರೂಪವೇ ? "

" ಶಬ್ದರೂಪಕ್ಕೆ ರೂಪ ಕೊಡುವ ರೂಪ. "

" ನಾನು ಬೇಡಿದ ಕಣ್ಣು ಇಂತಹವೇ ? ಕತ್ತಲೆ ತುಂಬಿದ ಎದೆಯನ್ನು ನಾನು ಬಯಸಿದೆನೇ ? "

" ಹೌದು. ಈಗಿರುವ ಕಣ್ಣು ಬರಿ ಕಾಜು, ಕತ್ತಲೆಯಲ್ಲಿ ಕಾಣುವುದೇ ನಿನ್ನ ಕಣ್ಣು ? "

" ಇಲ್ಲ. "

" ಇದಕಿಹುದು ಒಳಗಣ್ಣು. ತನ್ನ ತಾನೆ ಬೆಳಗುವ ಕಣ್ಣು. "

" ಕೊಡಬಹುದೇ ನೀನವನು ? "

" ಕೊಡಲಾರದಿಲ್ಲ. "

" ನನ್ನ ಮರುಳು ಮಾಡಬೇಕೆಂದಿಲ್ಲವಷ್ಟೆ ? "

" ಇಲ್ಲ, ನನ್ನ ಮೈಮಿಂಚೆ ! ನನ್ನ ನೆರಳು ತಾಕಿದವರು ನೆಲಬಿಟ್ಟು ಏಳುವರು. ತಮ್ಮ ತಾ ಮರೆಯುವರು. ನನ್ನ ಯಾರು ಗುರುತಿಸರು. ಜಗದಲ್ಲಿಯ ಒಗಟ ನಾನಾಗಿರುವೆ. ಇದು ನೋಡು. "

ಆ ಆಕಾರವು ರೂಪವನ್ನು ಬದಲಾಯಿಸಿತು. ನಾನು ಮರದಡಿಯಲ್ಲಿ ಮೊದಲು ಕಂಡ ತರುಣಿಯೆ ಈಗ ಮತ್ತೆ ಕಂಡಳು. ಚಕಿತನಾದೆ.

" ಇನ್ನು ಸಿರು ! ಇನ್ನು ಸಿರಾಡು ! " ಎಂದು ಕೂಗಿ ಹೇಳಿ ಅದೇ ಬಂಡೆಯಲ್ಲಿ ಅಡಗಿಕೊಂಡಳು. ( ೨೦–೨–೧೯೩೧ )

ಉತ್ಸಾಹ ತುಂಬಿದವನಾಗಿ ಅಲ್ಲಿಂದ ಎದ್ದೆ. ನದಿಯನ್ನು ದಾಟಿ ಗುಡ್ಡದ ಮೇಲೇರಿ ಹೋಗುವ ಹಾದಿಯನ್ನು ಹಿಡಿದು ಮುಂದೆ ಹೊರಟೆ. ಸಂಜೆಯ ಹೊತ್ತಿಗೆ ಗುಡ್ಡದ ತುದಿ ಮುಟ್ಟಿದೆ.

## ಪ್ರಳಯಸುತ್ತಿಗೆ

ಎತ್ತರವಾದ ಕೋಡಗಲ್ಲೊಂದರ ತುದಿಯ ಮೇಲೆ ಹೋಗಿ ನಿಂತುಕೊಂಡೆ. ನನ್ನ ಕಾಲ ಕೆಳಗೆ ಮೋಡಗಳು ಬಂದು ಗುಡ್ಡಕ್ಕೆ ಮುತ್ತಿಡುತ್ತಿದ್ದವು. ಗುಡ್ಡದ ತಲೆಯ ಮೇಲೆ ಬಂದಿದ್ದ ಸೂರ್ಯನ ಕೆಂಬೆಳಕು ಆ ಮೋಡಗಳ ಮೇಲೆ ಹರಡಿತ್ತು. ಗುಡ್ಡದ ಮೇಲಿನಿಂದ ನೋಡಿದಾಗ ಅದು ಅತ್ಯಂತ ರಮಣೀಯವಾಗಿ ಕಂಡಿತು. ನದಿಯು ದಂಡೆಯನ್ನು ಹಿಡಿದು ಹರಿಯುವಂತೆ ಆ ಮೋಡಗಳು ಗುಡ್ಡಕ್ಕೆ ಹತ್ತಿಯೆ ಹೋಗುತ್ತಿದ್ದವು. ಗುಡ್ಡದ ಕೆಳಗಿನದಾವುದೂ ನನಗೆ ಸ್ಪಷ್ಟವಾಗಿ ಕಾಣಿಸುತ್ತಿರಲಿಲ್ಲ. ನಾನು ನಿಂತಿದ್ದು ಪ್ರಕಾಶದಲ್ಲಿ. ದೂರದಲ್ಲಿ ಕೆಳಗೆ, ಮೋಡದ ನೆರಳುಗವಿದಲ್ಲಿ ಅದೆಷ್ಟೊ ಜೀವಿಗಳು ಮುಖ ತಗ್ಗಿಸಿ ಓಡಾಡುತ್ತಿರುವುದು ನನಗೆ ಕಾಣುತ್ತಿತ್ತು. ಅವರಿಗೆ ಕಾಣುತ್ತಿದ್ದುದು ಮೋಡಗಳ ನೆರಳು.

ಒಮ್ಮೆ ಸುತ್ತಲೂ ನೋಡಿದೆ. ವೇಗದಿಂದ ಗಾಳಿಯ ಮೇಲೆ ತೇಲಿ ಹೋಗುತ್ತಿದ್ದ ಮೋಡಗಳನ್ನು ನೋಡಿ ನಾನೂ ಅವುಗಳ ಕೂಡ ತೇಲಿ ಹೋಗುತ್ತಿರುವಂತೆ ಅನಿಸಿತು. ಗುಡ್ಡದಾಚೆಯ ಮಗ್ಗಲು ನೋಡಲು,

ಕೆಂಪು ಕೆಂಪಾಗಿ ಹೊಳೆಯುತ್ತಿದ್ದ ದೂರದ ಸಮುದ್ರವು ಮೇಲೆ ತೆರೆಗಳನ್ನು ಉಕ್ಕಿಸುತ್ತಿದ್ದರೂ ಒಳಗೆ ಗಂಭೀರವಾಗಿದ್ದು ಅನಂತದ ಕಲ್ಪನೆಯನ್ನು ತಂದುಕೊಡುತ್ತಿತ್ತು. ಗುಡ್ಡದ ಇನ್ನೊಂದು ಮಗ್ಗಲು ನೋಡಿದರೆ ಕಣ್ಣು ತಿರುಗುವಂತಹ ಆಳವಾದ ಕೊಳ್ಳ. ಅದರಾಚೆ ಮತ್ತೊಂದು ಪರ್ವತ. ನಾನು ನಿಂತಲ್ಲಿಂದ ಆ ಪರ್ವತ ಏನಿಲ್ಲೆಂದರೂ ಆರೇಳು ಮೈಲು ದೂರವಿರಬಹುದು.

ನಾನು ನಿಂತ ಗುಡ್ಡದೊಳಗಿಂದ ಸುವಾಸನೆ ಎಲ್ಲಿಂದಲೊ ಹರಿದು ಬರುತ್ತಿತ್ತು. ಇಡಿ ಗುಡ್ಡ ಹಸಿರು ಮುರಿಯುತ್ತಿತ್ತು. ಆದರೆ ಎದುರಿಗೆ ಕಾಣುತ್ತಿದ್ದ ಆ ಪರ್ವತದಲ್ಲಿ ಮಾತ್ರ ಒಂದು ಕಂಟೆಯೂ ಕಾಣುತ್ತಿರಲಿಲ್ಲ. ಬರಿ ಕಲ್ಲು-ಗುಡ್ಡ. ಮೊಸಳಿಯ ಮೈಯಂತಿದ್ದ ಆ ಒಂಕು-ಡೊಂಕು ಕಲ್ಲುಗಳ ಸಂದಿಯಲ್ಲಿ ಹಾಯ್ದು ಒಂದು ಬೆಳ್ಳಗಿನ ಪ್ರವಾಹವು ಎಲ್ಲಿಂದಲೊ ಹೊರಟು ಕೆಳಗಿಳಿದು ಆ ಆಳವಾದ ಕೊಳ್ಳದಲ್ಲಿ ಎಲ್ಲಿಯೊ ಮಾಯವಾಗಿತ್ತು. ಆ ಪ್ರವಾಹದಿಂದ ಹೊರಬೀಳುತ್ತಿದ್ದ ಗಂಭೀರನಾದವು ಅಲ್ಲಿ ಅವಿರತವಾಗಿ ನೆಲಸಿದ್ದ ಶಾಂತತೆಯ ಆಳವನ್ನು ಹೆಚ್ಚಿಸುತ್ತಿದ್ದಿತು. ಹಾವಿನಂತೆ ಡೊಂಕು ಡೊಂಕಾದ ದಾರಿಯೊಂದು ಆ ಪರ್ವತದ ಒಂದು ತುದಿಯಿಂದ ಹೊರಟು ಇನ್ನೊಂದು ತುದಿಯಲ್ಲಿ ಕಾಣದಾಗಿತ್ತು.

ಆ ದಾರಿಗುಂಟ ಕುತೂಹಲದಿಂದ ನನ್ನ ದೃಷ್ಟಿಯನ್ನು ಹರಿಯಿಸಿದೆ. ಆ ದಾರಿ ಮಾಯವಾಗಿದ್ದಲ್ಲಿ ಒಂದು ಕೋಟೆಯ ಗೋಡೆಯು ಕಾಣಿಸಿಕೊಂಡಿತು. ಅದರಲ್ಲಿ ಒಂದು ದೊಡ್ಡ ಅಗಸಿಬಾಗಿಲಿತ್ತು. ತುದಿಗಾಲ ಮೇಲೆ ನಿಂತು ಹುಬ್ಬಿಗೆ ಕೈಹಚ್ಚಿ ಆ ಬಾಗಿಲೊಳಗಿಂದ ಆಚೆಗೆ ನೋಡಿದೆ. ಭವ್ಯವಾದ ಪಟ್ಟಣವೊಂದು ಎಲ್ಲ ವಿವರದಲ್ಲಿಯೂ ಸ್ಪಷ್ಟವಾಗಿ ಕಂಡಿತು.

ಮನೆಮನೆಗೂ 'ಗುಡಿ' ನಿಂತಿತ್ತು. ತಳಿರು ತೋರಣ ಪಟ್ಟಣವನ್ನೆ ಸಿಂಗರಿಸಿತ್ತು. ಎಲ್ಲವೂ ಉಲ್ಲಾಸದಲ್ಲಿತ್ತು. ಇದ್ದಕಿದ್ದಂತೆ ಕಹಳೆ ಕೊಂಬು ಹಲಿಗೆ ಮೊದಲಾದ ರಣವಾದ್ಯಗಳು ಮೊಳಗಹತ್ತಿದವು. ಪಟ್ಟಣವೆಲ್ಲ ಬರಿದಾಗಹತ್ತಿತು. ಎಲ್ಲ ಜನರೂ ಕೆಲರು ಆನೆಯ ಮೇಲೆ, ಕೆಲರು ಒಂಟೆಯ ಮೇಲೆ, ಕೆಲರು ಕುದುರೆಯ ಮೇಲೆ, ಕೆಲರು ಬೆಳ್ಳಿ-ಬಂಗಾರದ ರಥಗಳಲ್ಲಿ, ಉಳಿದವರೆಲ್ಲ ನಡೆಯುತ್ತ, ಬಿಲ್ಲು, ಬಾಣ, ಬರ್ಚಿ, ಕತ್ತಿ, ಢಾಲು ತಮತಮಗೆ ಬೇಕಾದ ಆಯುಧಗಳನ್ನು ಕೈಯಲ್ಲಿ ಹಿಡಿದುಕೊಂಡು ರಣಾವೇಶದಿಂದ

ಒದರುತ್ತ, ಚೀರುತ್ತ, ಕೇಕೆಹಾಕುತ್ತ ಆ ಅಗಸಿಬಾಗಿಲೊಳಗಿಂದ ಸಾಲಾಗಿ ಹೊರಬಿದ್ದು ಪರ್ವತದಡಿಯಲ್ಲಿದ್ದ ಆ ದಾರಿಯನ್ನು ಹಿಡಿದರು.

ಅವರನ್ನೆ ನಾನು ನೋಡುತ್ತ ನಿಂತಿರುವಾಗ ಒಮ್ಮೆಲೆ ಕಿವಿಯಧಾರೆಗಳು ಕಿತ್ತುವಂತೆ ಒಂದು ಮಹಾಶಬ್ದವು ಪರ್ವತದ ತುದಿಯಲ್ಲಿ ಕೇಳಿಸಿತು. ಗಾಬರಿಯಾಗಿ ಅತ್ತ ಕಡೆಗೆ ನೋಡಿದೆ. ತುಟ್ಟತುದಿಯಲ್ಲಿದ್ದ ಒಂದು ದೊಡ್ಡ ಬಂಡೆಗಲ್ಲು ಹೊಯ್ದಾಡಹತ್ತಿತ್ತು! ಅದರ ಹಿಮ್ಮಗ್ಗಲಿಂದ ಸುತ್ತಿಗೆಯ ಏಟಿನ ಶಬ್ದ ಕೇಳಿಸಹತ್ತಿತು. ಅದೇ ಪರ್ವತದಲ್ಲಿ ಹರಿದು ಬರುತ್ತಿದ್ದ ಪ್ರವಾಹದ ಗಂಭೀರನಾದಕ್ಕೆ ಇದು ತಾಳ ಹಿಡಿದಂತಿತ್ತು. ಹೊಯ್ದಾಡುತ್ತಿದ್ದ ಬಂಡೆಯೂ ತಾಳಕ್ಕೆ ಸರಿಯಾಗಿತ್ತು.

ಆ ಬಂಡೆ ಇದೀಗ ಕೆಳಗುರುಳಬಹುದೆಂದೆನಿಸಿತು. ಉರುಳಿದರೆ ಹಾಯ್ದುಹೋಗುತ್ತಿದ್ದ ಆ ಜನರ ಗತಿಯೇನೆಂದು ನನ್ನ ಎದೆ ನಡುಗಿತು. ಏನು ಮಾಡಬೇಕೆನ್ನುವದೂ ತಿಳಿಯದಾಯಿತು. ನಾನು ನಿಂತದ್ದು ಎತ್ತರದ ಮೇಲೆ. ಅವರಿಗೆ ನಾನು ಕಾಣಿಸುವಂತೂ ಇಲ್ಲ; ನನ್ನ ಮಾತು ಕೇಳಿಸುವಂತೂ ಇಲ್ಲ. ನನಗೆ ಕೇಳಿಸಿದ ಆ ಮಹಾಶಬ್ದ ಅವರಿಗೂ ಕೇಳಿಸಿತ್ತೋ ಇಲ್ಲವೋ? ಅವರು ಅತ್ತ ಲಕ್ಷ್ಯವಿಲ್ಲದೆ ಹಾಗೇ ಮುಂದೆ ಸಾಗಿದ್ದರು. ಅದು ಉರುಳುವುದರಿಂದ ಸಂಭವಿಸಬಹುದಾದ ಅನಾಹುತವನ್ನು ನೆನೆದು ನನ್ನಿಂದ ಸುಮ್ಮನಿರುವುದಾಗಲಿಲ್ಲ. "ಹೋ! ಬಂಡೆ ಉರುಳುತ್ತದೆ! ಸರಿಯಿರಿ! ಸರಿದು ನಿಲ್ಲಿರಿ!" ಎಂದು ಕೂಗಿಬಿಟ್ಟೆ. ನನ್ನ ಕೂಗೂ ಯಾರಿಗೂ ಕೇಳಿಸಿದಂತೆ ತೋರಲಿಲ್ಲ. ಅವರು ಹಾಗೇ ಸಾಗಿದ್ದರು.

ಬಂಡೆ ಉರುಳಿತು!

ನಾನು ನೋಡಲಾರದೆ ಕಣ್ಣುಮುಚ್ಚಿಕೊಂಡೆ.

ತಿರುಗಿ ತೆಗೆದು ನೋಡಿದಾಗ ಹೆಣ್ಣುಮಗಳೊಬ್ಬಳು ಆ ಬಂಡೆಯ ಕೆಳಗೆ ಸಿಕ್ಕದ್ದು ತಿಳಿದುಬಂತು. 'ಅಯ್ಯೋ! ಪಾಪ!' ಎಂದು ಮರುಗಿದೆ.

ಮತ್ತೆ ಆ ಪರ್ವತದ ಕಡೆಗೆ ಕಣ್ಣು ಹೊರಳಿಸಿದೆ. ಮತ್ತೊಂದು ಅದಕ್ಕಿಂತ ದೊಡ್ಡ ಬಂಡೆಯೊಂದು ಹೊಯ್ದಾಡಹತ್ತಿತ್ತು. ನನ್ನ ಮೈ ಜುಮ್ಮೆಂದಿತು. "ಮಾನವರನ್ನು ಈ ರೀತಿಯಾಗಿ ಮಣ್ಣುಪಾಲುಮಾಡಬೇಕೆಂದು ದೈವಸಂಕಲ್ಪವಿದ್ದೀತೇ?" ಎಂದುಕೊಂಡೆ. ಬಂಡೆಯುರುಳು

ವುದು ಮೊದಲಿಗೇ ನನಗೆ ತಿಳಿದರೂ ಈ ಅನಾಹುತವನ್ನು ತಪ್ಪಿಸಲಿಕ್ಕಾಗ ಲಿಲ್ಲವಲ್ಲ ಎಂದು ಒಳಗೊಳಗೇ ಕಳವಳಗೊಂಡೆ; ನನ್ನ ನಿಸ್ಸಹಾಯತೆಯನ್ನು ನೆನೆದು ಮಿಡುಕಿದೆ. ಬಂಡೆ ಉರುಳಲೇಬೇಕಾಗಿತ್ತು; ಮಾನವರು ಸಾಯಲೇ ಬೇಕಾಗಿತ್ತು; ನಾನಿದನ್ನೆಲ್ಲ ಸಾಕ್ಷಿಯಾಗಿ ನೋಡಲೇಬೇಕಾಗಿತ್ತು. ಇದೇ ದೈವಸಂಕಲ್ಪ. ಕುರುಡರಂತೆ ಸಾವಿನ ಬಾಯಿಗೆ ತುತ್ತಾಗುತ್ತಿರುವ ಅವರನ್ನು ಕಂಡೂ ಕಂಡು ಸುಮ್ಮನಿರಬೇಕು.

ಎರಡನೆಯ ಬಂಡೆಯೂ ಉರುಳಿತು!

ಈ ಸಲ ಗಂಡುಸೊಬ್ಬನು ಅದರ ಬಾಯಿಗೆ ತುತ್ತಾಗಿದ್ದನು.

ಒಂದು ಕ್ಷಣ ಹೋಗುವದರೊಳಗಾಗಿ ಮತ್ತೊಮ್ಮೆ ಪ್ರಳಯಕಾಲದ ಗುಡುಗಿನ ಮಹಾಶಬ್ದವಾಯಿತು. ಕಣ್ಣೆತ್ತಿ ಪರ್ವತದ ಕಡೆಗೆ ನೋಡಿದೆ. ಇಡಿಗಿಡೀ ಪರ್ವತವೇ ಹೊಯ್ದಾಡಹತ್ತಿತ್ತು. ಅದನ್ನು ನೋಡಿಯಂತೂ ಪ್ರಳಯಕಾಲವೇ ಪ್ರಾರಂಭವಾಯಿತೆಂದು ಗಾಬರಿಯಾದೆ. ಆ ಇಡಿ ಪಟ್ಟ ಣವೆ ಪರ್ವತದ ಕೆಳಕ್ಕೆ ಸಿಕ್ಕು ಮಣ್ಣುಗೂಡಿ ಹೋಗುತ್ತಿತ್ತು. ಅದನ್ನೆಲ್ಲ ನೆನೆದು ಅಳುವು ತುಂಬಿ ಬಂತು. 'ಅಯ್ಯೋ! ಯಾರೂ ಈ ಸಂಹಾರವನ್ನು ತಡೆಯುವವರಿಲ್ಲವೆ? ಇಂತಹ ಪ್ರಳಯದಲ್ಲಿಯೂ ಏನು ಸುಖವಿರಬಹುದು? ಇದನ್ನು ಪ್ರಾರಂಭಿಸಿದ ಆ ರುದ್ರಶಕ್ತಿ ಏನು ಆನಂದಪಡೆಯಬಹುದು?' ಹೀಗೇ ಏನೇನೊ ಅಂದುಕೊಂಡೆ.

ನಾನು ಹೀಗೆ ಅಂತರ್ಮುಖಿಯಾದಾಗಲೆ ಇಡೀ ಪರ್ವತವು ಉರುಳಿ ಬಿತ್ತು; ಪಟ್ಟಣವೆಲ್ಲ ಮುಚ್ಚಿಹೋಯಿತು.

'ಏನು ಮಾಡಲಿ? ಎಲ್ಲಿಗೆ ಹೋಗಲಿ?' ಎಂದು ನನ್ನನ್ನೆ ಕೇಳಿ ಕೊಂಡೆ. ಉತ್ತರವೇನೂ ಬರಲಿಲ್ಲ ಒಳಗಿನಿಂದ. ದಂಗುಬಡಿದು ಹಾಗೇ ಕೆಲಹೊತ್ತು ಸುಮ್ಮನೆ ಕುಳಿತುಕೊಂಡೆ.

'ಈ ಬಂಡೆಗಳನ್ನು ಉರುಳಿಸಿದವರು ಯಾರಿರಬಹುದು? ಸುತ್ತಿಗೆ ಏಟಿನ ಸಪ್ಪಳ ಏನದು? ಯಾರದು? ಅಲ್ಲಿ ಹೋದರೇನಾದರೂ ಆ ಕೈ ಕಾಣಬಹುದೇ? ಹೀಗೆ ಮರೆಯಲ್ಲಿದ್ದುಕೊಂಡು ಸಂಹಾರಮಾಡುವುದೇ? ಇದು ಸರಿಯಲ್ಲ. ಅನ್ಯಾಯ. ದೇವನ ಅನಂತಶಕ್ತಿಗೆ ಕುಂದು ಇದು. ಮಾನವರ ಕಣ್ಮರೆಯಾಗಿ ಆಟವಾಡುವ ಶಕ್ತಿ ಈ ದೈವಕ್ಕಿದ್ದದ್ದೆ ಒಂದು

ತಪ್ಪಾಗಿದೆ.' ಎಂದು ಏನೇನೊ ಮನಸ್ಸಿನಲ್ಲಿ ವಿಚಾರಚಕ್ರ ತಿರುಗುತ್ತಿತ್ತು.

ಅಲ್ಲಿಂದೆದ್ದೆ. ಹಾಳು ಬಿದ್ದ ಪಟ್ಟಣದ ಕಡೆಗಾದರೂ ಹೋಗೋಣ ವೆಂದು ಅತ್ತ ಹೊರಟೆ.

ಕೋಟೆಯ ಗೋಡೆಯ ಹತ್ತಿರ ಬಂದೆ. ಬಂದೊಡನೆ ಆ ಸುತ್ತಿಗೆ ಏಟಿನ ಸಪ್ಪಳ ನನಗಿನ್ನೂ ಕೇಳಿಸಿತು. ಚಕಿತನಾಗಿ ಆ ಗೋಡೆಯ ಸುತ್ತು ಮುತ್ತಲೂ ಹುಡುಕಾಡಿದೆ. ಯಾರೂ ಕಾಣಿಸಲಿಲ್ಲ. ಇನ್ನು ಹೋಗ ಬೇಕೆನ್ನುವಷ್ಟರಲ್ಲಿ ಆ ಗೋಡೆ ಹೊರಳಿ ಬಿತ್ತು. ಗೋಡೆಯ ಒಳಗೇನಾ ದರೂ ಇರಬಹುದೆಂದು ಹಣಿಕಿಕ್ಕಿದೆ. ಅಲ್ಲಿಯೂ ಕಾಣಿಸಲಿಲ್ಲ. ಆ ಸುತ್ತಿಗೆ ಏಟು ಬೇರೆ ಕಡೆ ಕೇಳಿಸಹತ್ತಿತು. ಅತ್ತ ಹೊರಟೆ. ಅಲ್ಲಿಗೆ ಹೋಗಿ ಮುಟ್ಟುವಷ್ಟೊತ್ತಿಗೆ ಅಲ್ಲಿಂದ ಬೇರೆ ಕಡೆಗೆ ಕೇಳಿಸಹತ್ತಿತು. ಅತ್ತ ಹೊರಟೆ. ಹೀಗೇ ಆ ಸಪ್ಪಳದ ಬೆನ್ನು ಹತ್ತಿ ನಡೆದೆ.

ಅರಮನೆಗಳು, ಗುಡಿಗೋಪುರಗಳು, ಕೋಟೆಕೊತ್ತಳಗಳು ಎಲ್ಲವೂ ಆ ಸುತ್ತಿಗೆ ಏಟಿಗೆ ಸಿಕ್ಕು ಉರುಳಿಬಿದ್ದು ನೆಲಸಮವಾಗಿದ್ದವು. ಜನರ ಸದ್ದಂತೂ ಅಡಗಿಯೆ ಹೋಗಿತ್ತು. ಎಲ್ಲಿ ನೋಡಿದರೂ ಹಾಳು, ಹಾಳು! ರಣಗುಟ್ಟು ತ್ತಿರುವ ಆ ಪಟ್ಟಣದಲ್ಲಿ ಆ ಸಪ್ಪಳದ ಬೆನ್ನು ಹತ್ತಿ ಎಲ್ಲೆಲ್ಲಿಯೊ ಅಂಡೊಲೆದು ಬಂದು, ಬೇಸತ್ತು ತನ್ನ ಅಳಿಗಾಲದ ಹಾದಿಯನ್ನೆ ಎದುರುನೋಡುತ್ತ ನಿಂತುಕೊಂಡ ಒಂದು ಗೋಡೆಯ ನೆರಳಿಗೆ ವಿಶ್ರಾಂತಿಗಾಗಿ ಹೋಗಿ ನಿಂತೆ. ಅಲ್ಲಿಯೂ ಆ ಏಟಿನ ಸಪ್ಪಳ ಕೇಳಿಸ ಹತ್ತಿತು. ಅತ್ತಿತ್ತ ನೋಡಿದೆ. ಅಷ್ಟರಲ್ಲಿ ಆ ಗೋಡೆಯೆ ಹೊರಳಿಬಿತ್ತು.

ಆದರೊಳಗಿಂದ ಒಂದು ಆಕೃತಿ ಎದ್ದು ನಿಂತಿತು. ನಾನು ಈ ಹಿಂದೆ ನೋಡಿದಂತಹದೇ. ತಲೆಯ ಮೇಲೆ ಕೋಡು; ಭುಜದ ಮೇಲೆ ರೆಕ್ಕೆ; ಇಳಿಬಿದ್ದ ಉದ್ದ ಕಪ್ಪು ಕೂದಲು ; ಕೊರಳಲ್ಲಿ ಹೂವಿನ ಮಾಲೆ; ಬಲಗೈಯಲ್ಲಿ ಸುತ್ತಿಗೆ; ಎಡಗೈಯಲ್ಲಿ ಕಮಲದ ಮೊಗ್ಗೆ.

ನನ್ನನ್ನು ನೋಡಿ ಮುಂದೆ ಹಾರಿ ಬಂದು “ಇಕಾ, ನೋಡು; ಕಾಣಿಸಿ ಕೊಂಡಿದ್ದೇನೆ. ಏನು ಮಾಡುವದಿದ್ದರೆ ಮಾಡು. ಇದೇ ನಿನಗೆ ಕಾಣದ ಆ ಕೈ; ಬಂಡೆಗಳನ್ನು ಉರುಳಿಸಿದ್ದು; ಪಟ್ಟಣವನ್ನು ಹಾಳುಮಾಡಿದ್ದು ; ಮಾನವ ರನ್ನು ಸಂಹಾರಮಾಡಿ ಅನ್ಯಾಯ ಮಾಡಿದ್ದು ; ತಡೆಯುವ ಶಕ್ತಿಯಿದ್ದರೆ

ತಡೆಯ ಬಾ ಈ ಸಂಹಾರವನ್ನು. ನಾನೇ ಆ ಶಕ್ತಿ; ನಾನೇ ಆ ರುದ್ರ. ನನಗಿದೆ ಆನಂದ ಪ್ರಳಯದಲ್ಲಿ. ನಿಮ್ಮ ಕಣ್ಮರೆಯಾಗಿ ಈ ಪ್ರಳಯ ಪ್ರಾರಂಭಿಸಿಲ್ಲ. ಕಣ್ಣಿದ್ದೂ ನೋಡದ ಕುರುಡರು ನೀವು. ಈ ಪ್ರಳಯ ನೀವೇ ತಂದುಕೊಂಡದ್ದು. ನಮ್ಮ ದೊರೆ ನಿಮಗೆ ಬೇಕಾದ್ದೆಲ್ಲವನ್ನೂ ದಯಪಾಲಿಸಿದ. ಅದೆಲ್ಲವನ್ನೂ ಅವನ ನಾಶಕ್ಕಾಗಿಯೆ ನೀವು ಉಪಯೋಗಿಸಹತ್ತಿದಿರಿ. ನಿಮ್ಮ ಜೀವನದಲ್ಲಿ, ಈ ಸೃಷ್ಟಿಯಲ್ಲಿ ಅವನಿಟ್ಟ ಸ್ಪಂದನ ಯಾರಿಗೂ ತಿಳಿಯಲಿಲ್ಲ. ಅಂತೇ ಈ ಪ್ರಳಯವನ್ನು ಮಾನವರ ಮೇಲೆ ಕರುಣಿಸಿದ್ದಾನೆ ದೊರೆ. ಈ ಪ್ರಳಯ ಹೊಸ ಸೃಷ್ಟಿಗೆ ಹಾದಿ. ತಿಳಿಯಿತೇ? ನೀನೊಬ್ಬನೇ ಉಳಿದಿರುವೆ. ಇಕಾ, ಇದನ್ನು ಎದುರಿಸು." ಎಂದು ಬಲಗೈಯನ್ನು ಮೇಲಕ್ಕೆತ್ತಿ ಹಿಡಿದನು. ಅದರಿಂದ ತಪ್ಪಿಸಿಕೊಳ್ಳಬೇಕೆಂದು ನಾನು ದಾರಿ ಸಿಕ್ಕತ್ತ ಓಡಹತ್ತಿದೆನು. ಆಕೃತಿಯು ಗಹಗಹಿಸಿ ನಕ್ಕು ಕೈಯಲ್ಲಿಯ ಸುತ್ತಿಗೆಯನ್ನು ನನ್ನ ಬೆನ್ನು ಹಚ್ಚಿ ಮಾಯವಾಯಿತು.

ಸುತ್ತಿಗೆ ನನ್ನ ಬೆನ್ನುಹತ್ತಿ ಬರಹತ್ತಿತು.

ನಾನು ಓಡಿ ಓಡಿ ಬೇಸತ್ತು ಕೊನೆಗೆ ಕೈಗೆ ಸಿಕ್ಕ ಒಂದು ಕಲ್ಲನ್ನು ತೆಗೆದುಕೊಂಡು ಬೆನ್ನಟ್ಟಿ ಬರುತ್ತಿದ್ದ ಆ ಸುತ್ತಿಗೆಗೆ ನಿರಿಯಿಟ್ಟು ಹೊಡೆದೆ.

ಎರಡೂ ಒಂದಕ್ಕೊಂದು ಬಡಿದಾಡಿ ಕೊನೆಗೆ ನೆಲಕ್ಕೆ ಬಿದ್ದವು.

ಇದನ್ನು ನೋಡಿ ಆಕೃತಿಯು ಮತ್ತೆ ನಕ್ಕು ತಾನೇ ನನ್ನ ಬೆನ್ನು ಹತ್ತಿತು.

ತಪ್ಪಿಸಬೇಕೆಂದು ನಾನೊಂದು ಭಾವಿಯಲ್ಲಿ ಹಾರಿಕೊಂಡು ನೀರಲ್ಲಿ ಮುಳುಗಿ ಕುಳಿತೆ.

ಆಕೃತಿ ಬಂದು ಭಾವಿಯಲ್ಲಿ ಹಣಿಕಿ ಹಾಕಿ ನೋಡಿ ಕೈಯಲ್ಲಿಂಸು ಸತ್ತಿಗೆಯನ್ನು ನನ್ನ ಕಡೆಗೆ ಮತ್ತೆ ಎಸೆಯಿತು.

ನಾನದನ್ನು ತಪ್ಪಿಸಿದೆ.

ಆಕೃತಿ ಮುಗುಳುನಗೆ ನಗುತ್ತ "ಮೇಲೆ ಬಾ ಇನ್ನು; ನೀನು ಗೆದ್ದಿರುವೆ" ಎಂದಿತು.

ನೀರೊಳಗಿಂದ ಒಂದೇ ಹಾರಿಕೆಗೆ ಮೇಲೆ ಹಾರಿಬಂದು ಅವ ನೆದುರಿಗೆ ನಿಂತೆ.

ನನ್ನ ಹಣೆಗೆ ಕೈ ಮುಟ್ಟಿಸಿ "ಕಣ್ಣುಮುಚ್ಚಿ ನೋಡು" ಎಂದಿತು.

ಕಣ್ಣು ಮುಚ್ಚಿದೊಡನೆ ಅದ್ಭುತ ದೃಶ್ಯವೊಂದು ಕಾಣಿಸಿತು.

ನಿಶ್ಶಬ್ದ. ಕಗ್ಗತ್ತಲು. ಚಂದ್ರನಿಲ್ಲ; ನಕ್ಷತ್ರಗಳಿಲ್ಲ.

ಒಂದು ತೇಜೋಗೋಲವು ಸಾವಕಾಶವಾಗಿ ಭೂಮಿಯಿಂದ ಮೇಲಕ್ಕೇಳುತ್ತ ಆಕಾಶವನ್ನು ಸೇರಿತು.

ಅಲ್ಲಿಂದ ಅಂತಹ ತೇಜೋಗೋಲಗಳ ಗುಂಪಿಗೆ ಗುಂಪೇ ಒಂದು ಮೇಲಕ್ಕೆದ್ದು ಆಕಾಶವನ್ನು ತುಂಬಿತು. ಕ್ಷಣಕಾಲ ಕಳೆಯಿತು.

ಅಲ್ಲಿಂದ ಇವೆಲ್ಲವುಗಳಿಗಿಂತಲೂ ತೇಜಃಪುಂಜವಾದ ಒಂದು ಪ್ರಖರ ತೇಜವು ಆಕಾಶದಿಂದ ಕೆಳಗಿಳಿದು ಬರುತ್ತಿರುವುದು ಕಂಡಿತು.

ಅದನ್ನೇ ನೋಡುತ್ತ ನಿಂತುಕೊಂಡೆ.

ಅದು ನಾನಿದ್ದ ಕಡೆಗೇ ಬರುತ್ತಿರುವ ಹಾಗೆನಿಸಿತು.

ಕುತೂಹಲ ಇನ್ನೂ ಹೆಚ್ಚಾಯಿತು.

ಸಮೀಪ ಬಂದ ಹಾಗೆಲ್ಲ ಅದೊಂದು ಪ್ರಕಾಶನಮಾನ ದಿವ್ಯರಥವಾಗಿ ಕಂಡಿತು.

ರೆಕ್ಕೆಯ ಕುದುರೆಗಳೆರಡು ಅದನ್ನು ಎಳೆಯುತ್ತಿದ್ದವು.

ರಥದೊಳಗೊಂದು ದಿವ್ಯಮೂರ್ತಿ ಕುಳಿತದ್ದು ಕಂಡಿತು.

ಆ ಪ್ರಕಾಶವೆಲ್ಲ ಅಲ್ಲಿಂದಲೇ ಹರಿದುಬರುತ್ತಿತ್ತು. ಆ ಮೂರ್ತಿಯನ್ನು ನೋಡಿದೊಡನೆ ಮನಸ್ಸು ಅರಳಿತು. ಆನಂದದ ಸುವಾಸ ಎಲ್ಲ ಕಡೆಗೂ ಹಬ್ಬಿತು.

ದರ್ಶನದ ಒಳಗಣ್ಣು ತೆರೆಯಿತು.

ಕೈ ಮುಂದೆ ಮಾಡಿ ಆ ರಥದ ಕಡೆಗೆ ಧಾವಿಸಿದೆ.

ಒಳಗಿನ ಮೂರ್ತಿಯು ಅಭಯಹಸ್ತವನ್ನು ತೋರಿಸುತ್ತಿರುವಾಗಲೆ ಎಲ್ಲಾ ಮಾಯವಾಯಿತು. (೩-೧೨-೧೯೫೯)

ಮುಚ್ಚಿದ ಕಣ್ಣು ತಾವಾಗಿಯೆ ತೆರೆದವು. ಮುಗ್ಗುಲಲ್ಲಿದ್ದ ಆ ಆಕೃತಿಯೂ ಮಾಯವಾಗಿತ್ತು. ಹಾಳಾದ ಪಟ್ಟಣವೂ ಮರೆಯಾಗಿತ್ತು.

## ಗಾಳಿಯ ಹಡಗ

ನಾನೊಂದು ಸಮುದ್ರ ದಂಡೆಯ ವಿಸ್ತಾರವಾದ ಉಸುಬಿನ ಬೈಲಲ್ಲಿ ಕುಳಿತುಕೊಂಡಿದ್ದೆ.

ದೂರದಲ್ಲಿ ಸಮುದ್ರದ ನೀರು ಸೂರ್ಯಪ್ರಕಾಶಕ್ಕೆ ವಿವಿಧ ಬಣ್ಣ ತಳೆದು ರಂಜಿಸುತ್ತಿತ್ತು.

ತೆರೆಗಳ ಹೊಯ್ದಾಟ, ತಾಕಲಾಟಗಳು ಸಮುದ್ರಮುಖದ ಗಾಂಭೀರ್ಯವನ್ನು ಕೆಡಿಸಿರಲಿಲ್ಲ.

ಗಾಳಿಯೂ ಸೌಮ್ಯವಾಗಿತ್ತು.

ಸಮುದ್ರದ ಕಡೆಗೇ ನೋಡುತ್ತಿದ್ದಾಗ ಒಂದು ದೃಶ್ಯ ನನ್ನ ಲಕ್ಷ್ಯವನ್ನು ಅತ್ತ ಸೆಳೆಯಿತು.

ನಾಲ್ಕೆಂಟು ಜನರ ಗುಂಪೊಂದು ನೀರ ಸಮೀಪಕ್ಕೆ ಕುಳಿತು ಏನನ್ನೋ ಮಾಡುತ್ತಿರುವಂತೆ ಕಂಡಿತು.

ನೋಡಬೇಕೆಂದು ಕುಳಿತಲ್ಲಿಂದೆದ್ದು ಅವರಿದ್ದಲ್ಲಿಗೆ ಹೋದೆ.

ಎರಡು ಹೊಚ್ಚ ಹೊಸ ನಾವೆಗಳು ಸಮುದ್ರದಲ್ಲಿಳಿಯುವುದಕ್ಕೆ ಸಿದ್ಧವಾಗಿ ಉಸುಬಿನಲ್ಲಿ ಕಾದಿದ್ದವು.

ಒಯಸ್ಸಾದ ಒಬ್ಬ ಮುದುಕ ಒಂದು ನಾವೆಯ ಸಿಂಹಮುಖದ ಮೇಲೆ ಬಲಗೈಯಿಟ್ಟು, ಕಾಲಿಗೆ ಕಾಲು ತೊಡಕುಹಾಕಿಕೊಂಡು, ಎದುರಿಗಿದ್ದ ವಿಸ್ತಾರವಾದ ಸಮುದ್ರವನ್ನು ಏಕದೃಷ್ಟಿಯಿಂದ ನೋಡುತ್ತ ನಿಂತಿದ್ದನು.

ಆತನೇ ಆ ನಾವೆಗಳನ್ನು ಕಟ್ಟಿದಾತ.

ಕಟ್ಟುವ ಕೆಲಸವೆಲ್ಲ ಮುಗಿದಿದ್ದರೂ ಇನ್ನೂ ತಿಕ್ಕುವ ಒರೆಸುವ ಕೆಲಸ ನಡೆದೇ ಇತ್ತು.

ಎರಡೂ ನಾವೆಗಳು ಜೋಡಾಗಿಯೆ ನಿಂತಿದ್ದವು. ಜೋಡಾಗಿಯೆ ಹೊರಡಲಿದ್ದವು.

ಆ ನಾವೆಯ ಹತ್ತಿರ ಇಷ್ಟು ಜನ, ಈ ನಾವೆಯ ಹತ್ತಿರ ಇಷ್ಟು ಜನ ಕೆಲಸ ಮಾಡುತ್ತಿದ್ದರು.

ಮುದುಕನ ಕಲ್ಪನೆಯಂತೆಯೆ ಅವು ತಯಾರಾಗಿದ್ದವು. ಆತನ ಕಲಾ ಕೌಶಲ್ಯಬುದ್ಧಿ ಎಲ್ಲ ವಿವರಗಳಲ್ಲಿಯೂ ಒಡೆದುಕಾಣುತ್ತಿತ್ತು.

ಚಕ್‌ಚಕ್ಕೆಂದು ಹೊಳೆಯುವ ಬೆಳ್ಳಿಯ ತಗಡಿನಂತಹ ಪಾರದರ್ಶಕ ಹಾಳೆಗಳನೇಕ ಮುದುಕನ ಹತ್ತಿರ ಬಿದ್ದಿದ್ದವು. ಜನ ಅವನ್ನು ಒಯ್ದು ಒಯ್ದು ನಾವೆಗಳಿಗೆ ಬಡಿಯುತಿದ್ದರು.

ಎರಡರಲ್ಲಿ ಒಂದು ನಾವೆ ಬಹಳ ಹೊಳೆಯುತ್ತಿತ್ತು. ಇನ್ನೊಂದು ಕಪ್ಪಾಗಿತ್ತು.

ಮುದುಕ ಹೊಳೆಯುವ ನಾವೆಯ ಹತ್ತಿರವೆ ನಿಂತಿದ್ದ

ಅವನ ಹತ್ತಿರ ಬಿದ್ದಿದ್ದ ಆ ಪಾರದರ್ಶಕ ಬೆಳ್ಳಿಯ ತಗಡಿನಂತಹವನ್ನು ತೋರಿಸಿ "ಅವೇನು ?" ಎಂದು ಅದನ್ನು ಒಯ್ಯಲು ಬಂದವನೊಬ್ಬನನ್ನು ಕುತೂಹಲದಿಂದ ಕೇಳಿದೆ.

ಸಮುದ್ರದ ಆಚೆಗೆ ದೃಷ್ಟಿಯಿಟ್ಟ ಮುದುಕನು ನನ್ನ ಕಡೆಗೆ ಒಮ್ಮೆಲೆ ಹೊರಳಿ "ಗಾಳಿ-ಬೆಳಕು." ಎಂದಿಷ್ಟೆ ಉತ್ತರ ಕೊಟ್ಟು ಸುಮ್ಮನಾದ.

ನನಗೆ ಅರ್ಥವೇ ಆಗಲಿಲ್ಲ. "ಅಂದರೆ ?" ಎಂದು ಮತ್ತೆ ಕೇಳಿದೆ.

ಮುದುಕ ನಕ್ಕು "ಗಾಳಿ ಬೆಳಕು ಕೂಡಿಸಿ ಅವನ್ನು ತಯಾರಿಸಿದೆ. ಹೇಗಿವೆ ? ಮುಳುಗುವ ಭಯವಿಲ್ಲ." ಎಂದು ಹೇಳಿದ.

ವಿಸ್ಮಯಗೊಂಡೆ. ಕುತೂಹಲ ಮತ್ತೆ ಮಾತನಾಡಿಸಿತು. "ಇದು ಹೀಗೇಕೆ ? ಅದು ಹಾಗೇಕೆ ?" ಎಂದು ಆ ಎರಡು ನಾವೆಗಳನ್ನೂ ಕೈಯಿಂದ ತೋರಿಸಿ ಕೇಳಿದೆ.

ಮುದುಕ ನನಗೆ ತನ್ನನ್ನು ಹಿಂಬಾಲಿಸಲು ತಿಳಿಸಿ ಮುಂದೆ ಹೊರಟ.

ಬೆನ್ನು ಹತ್ತಿದೆ.

ಹೊಳೆಯುತ್ತಿದ್ದ ನಾವೆಯನ್ನು ತೋರಿಸಿ "ಇದು ಗಾಳಿಯ ಹಡಗ. ಅಂತೇ ಹಾಗಿದೆ. ಹೀಗಿದ್ದರೂ ಇವೆರಡೂ ಒಂದನ್ನೊಂದು ಬಿಟ್ಟು ಇರುವುದಿಲ್ಲ....."

ಮುದುಕ ಇನ್ನೂ ಏನನ್ನೊ ಹೇಳಬೇಕೆನ್ನುವುದರಲ್ಲಿದ್ದ. ಅಷ್ಟರಲ್ಲಿ

ಒಂದು ಸಂಕೇತಧ್ವನಿಯಾಯಿತು. ಮುದುಕ ಗಡಿಬಿಡಿಯಿಂದ ಬೇರೆ ಕಡೆಗೆ ಹೊರಟ.

ನಾವೆಗಳು ಹೊರಡುವ ಹೊತ್ತು ಸಮೀಪಿಸಿತು.

ಅಲ್ಲಿಯ ಜನ ಅವೆರಡು ನಾವೆಗಳನ್ನೂ ದಬ್ಬಿ ದಂಡೆಯಿಂದ ನೀರಲ್ಲಿ ಸರಿಸಿದರು.

ಪ್ರಯಾಣಿಕರು ಬರಹತ್ತಿದರು.

ಮುದುಕ ಹೊಳೆಯುವ ನಾವೆಯ ಸಿಂಹಮುಖವನ್ನು ಹಿಡಿದುಕೊಂಡು ನಿಂತು ಪ್ರತಿಯೊಬ್ಬ ಪ್ರಯಾಣಿಕನನ್ನೂ ನೋಡಿ ನೋಡಿ ಒಳಗೆ ಬಿಡಹತ್ತಿದ.

ಇರಿವೆಯ ಸಾಲಿನಂತೆ ಸಾಲಿಟ್ಟು ಬರುತ್ತಿದ್ದ ಆ ಅಸಂಖ್ಯ ಪ್ರಯಾಣಿಕರನ್ನು ನೋಡಿ "ಇವರೆಲ್ಲರನ್ನೂ ಈ ಎರಡೇ ನಾವೆಗಳು ಒಯ್ಯಬಹುದೇ ?" ಎಂಬ ಸಂಶಯ ನನ್ನ ತಲೆಯಲ್ಲಿ ಸುಳಿದಾಡಹತ್ತಿತು. ಮುದುಕನನ್ನು ಕೇಳಿಬಿಡಬೇಕೆಂದೆ. ಆದರೆ ಆತನ ಹತ್ತಿರ ನೆರೆದಿದ್ದ ಆ ಜನಸಂದಣಿಯನ್ನೂ ಆ ಗಡಿಬಿಡಿಯನ್ನೂ ನೋಡಿ ತಡೆಹಿಡಿದೆ.

ಕಣ್ಣುಮುಚ್ಚಿ ಕಣ್ಣುತೆರೆಯುವಷ್ಟರಲ್ಲಿ ಆ ಅಸಂಖ್ಯ ಪ್ರಯಾಣಿಕರೆಲ್ಲ ಗಾಳಿಯ ಹಡಗ ಒಂದರಲ್ಲಿ ಹತ್ತಿದ್ದರು !

ಮುದುಕನನ್ನು ಕೇಳುವ ಆವಶ್ಯಕತೆಯೆ ನನಗುಳಿಯಲಿಲ್ಲ.

ಪ್ರಯಾಣಕ್ಕಾಗಿ ಎಲ್ಲ ಸಿದ್ಧತೆಯಾಯಿತು.

ಸಂಕೇತಧ್ವನಿಗಾಗಿ ಮುದುಕ ಎದುರು ನೋಡುತ್ತಿದ್ದ.

ಮಣ್ಣಿನ ಹಡಗದಲ್ಲಿ ಚೌಕು ಚೌಕು ಪೆಟ್ಟಿಗೆಯಂತಹವುಗಳನ್ನು ತಂದು ತುಂಬಿದ್ದರು. ಅದರಲ್ಲಿ ಜನ ಯಾರೂ ಹತ್ತಿರಲಿಲ್ಲ.

ಅಷ್ಟರಲ್ಲಿ ನಾಲ್ಕಾರು ಪ್ರಯಾಣಿಕರು ಬಂದು ಆ ಮಣ್ಣಿನ ಹಡಗದಲ್ಲಿ ಹತ್ತಹೋದರು.

ಮುದುಕ ಅವರನ್ನು ಹಿಡಿದು ತಂದು ತನ್ನ ಹತ್ತಿರ ನಿಲ್ಲಿಸಿಕೊಂಡ.

ನಾನೂ ಅವರ ಹತ್ತಿರವೆ ಆದರೂ ಸ್ವಲ್ಪ ದೂರದಲ್ಲಿ ನಿಂತಿದ್ದೆ.

ಆ ನಾಲ್ಕಾರು ಪ್ರಯಾಣಿಕರು ಸುಮ್ಮನೆ ನಿಂತಿದ್ದರೂ ಅವರ ಹಾವ-ಭಾವ, ಒಬ್ಬರಿಗೊಬ್ಬರು ಕಣ್ಸನ್ನೆಮಾಡುವುದು, ಹುಬ್ಬುಹಾರಿಸುವುದು, ಹುಬ್ಬುಮುರಿಯುವುದು, ಹಲ್ಲುಕಡಿಯುವುದು, ಕೈಸನ್ನೆ ಮಾಡುವುದು, ತಲೆ

ಹಾಕುವುದು, ಮುದುಕನನ್ನು ಅವನ ಬೆನ್ನಹಿಂದೆ ಅಣಕಿಸುವುದು ಇವೆಲ್ಲವನ್ನೂ ನೋಡಿ ಅವರು ಏನೋ ಒಂದು ದುಷ್ಟಯೋಜನೆ ಮಾಡುತಿದ್ದಾರೆಂದು ನನಗೆ ಸ್ಪಷ್ಟವಾಗಿ ಎನಿಸಿತು. "ಇವರನ್ನು ಹತ್ತಿಸಬೇಡ" ಎಂದು ಮುದುಕನಿಗೆ ಹೇಳಿಬಿಡಲೇ ಎಂದುಕೊಂಡೆ.

ಅಷ್ಟರಲ್ಲಿ ಸಂಕೇತಧ್ವನಿಯಾಯಿತು.

ಮುದುಕ ಈಗ ಅವರಿಗೂ ಹತ್ತಲು ಅಪ್ಪಣೆ ಕೊಟ್ಟ. ಅವರ ಹಿಂದೆಯೆ ನನಗೂ ಹತ್ತಬೇಕೆನಿಸಿತು. ಒಂದು ಹೆಜ್ಜೆ ಮುಂದೆ ಕೂಡ ಇಟ್ಟೆ. ಮುದುಕ "ಸ್ವಲ್ಪ ತಡೆ." ಎಂದು ಸನ್ನೆ ಮಾಡದಿದ್ದರೆ ಹತ್ತಿಯೇಬಿಡುತ್ತಿದ್ದೆ. ಆದರೆ ಮುದುಕನಿಗಾಗಿ ತಡೆದು ಅಲ್ಲಿಯೆ ಸರಿದು ನಿಂತೆ.

ನಾವೆ ಹೊರಡುವ ಮೊದಲು, ಮುದುಕ ಎಲ್ಲರನ್ನೂ ಉದ್ದೇಶಿಸಿ ಪ್ರಯಾಣಕಾಲದ ಎಚ್ಚರಿಕೆಯ ನಾಲ್ಕು ಮಾತುಗಳನ್ನು ಹೇಳಿದ.

"ಕೇಳಿರಿ! ಆತ ತಿಳಿಸಲು ಹೇಳಿದ ಕೆಲ ಮಾತುಗಳನ್ನೆ ನಿಮಗೆ ತಿಳಿಸುತ್ತಿದ್ದೇನೆ. ಕಟ್ಟಿದವ ನಾನಾಗಿದ್ದರೂ **ಆತನ** ನಾವೆಗಳಿವು. ನಡೆಸುವಾತ **ಆತನೇ;** ನಿಮಗೆ ಕಾಣುವುದಿಲ್ಲ. ಆತನ ಆ ಮಾತು ನಿಮ್ಮ ದಾರಿಗೆ ಬೆಳಕಾಗಿ ನಿಂತಾವು ಎಂದು ನಂಬಿದ್ದೇನೆ. ಪಾಲಿಸುವುದು ಬಿಡುವುದು ನಿಮ್ಮನ್ನೆ ಕೂಡಿದೆ.

ಪ್ರಯಾಣಕ್ಕಂತೂ ಎಲ್ಲರೂ ಕೂಡಿಯೆ ಹೊರಟಿದ್ದೀರಿ. ಕೂಡಿಯೇ ಮುಟ್ಟಬೇಕೆಂದು ಆತನ ಆದೇಶವಿದೆ.

ಆ ಮಣ್ಣಿನ ಹಡಗ ನಿಮ್ಮ ಅನ್ನದ ಹಡಗ. ಅನ್ನ ಅಕ್ಷಯುವಿದೆ.

ಈ ಗಾಳಿಯ ಹಡಗ ನಿಮ್ಮ ಪ್ರಾಣದ ಹಡಗ. ಇದರಲ್ಲಿರುವಾಗಲೆಲ್ಲ ನೀವು ಸುರಕ್ಷಿತರು. ಅಭಯುವಿದೆ.

ನಿಮ್ಮ ಕಣ್ಣೆದುರಿಗಿದ್ದ ಈ ಅನಂತ ಸಮುದ್ರ ಜೀವನಸಮುದ್ರ.

ನಿಮ್ಮ ಹಡಗ ಹೊರಟಿರುವುದು ದಿವ್ಯಭೂಮಿಗೆ.

ಹಾದಿಯಲ್ಲಿ ಹತ್ತುವ ನಡುಗಡ್ಡೆಗಳು ನಿಮ್ಮನ್ನು ಮೋಸ ಮಾಡಿ ನಿಲ್ಲಿಸಿಯಾವು, ಇಳಿಸಿಕೊಂಡಾವು ಎಚ್ಚರಿಕೆ!

ಮಣ್ಣಿನ ಹಡಗಕ್ಕೆ ಯಾರೂ ಹೋಗಕೂಡದು. ಅದು ಯಾವಾ

ಗಲೂ ನಿಮ್ಮ ಸಂಗಡವೆ ಇರುತ್ತದೆ. ನೀವಿದ್ದಲ್ಲಿಯೆ ಅನ್ನ ಒದಗಿಬರುತ್ತದೆ. ಅನ್ನ ಇದ್ದಲ್ಲಿ ಮಾತ್ರ ನೀವು ಹೋಗಕೂಡದು. ಹೋದರೆ ಕ್ಷೇಮವಿಲ್ಲ.

ಗಾಳಿಯ ಹಡಗದಲ್ಲಿದ್ದವರಿಗೆಲ್ಲ ಸಾಲುವಷ್ಟು 'ಜೀವರಕ್ಷಾ ಹೋಡಿ' ಗಳ ಸಂಗ್ರಹವಿದೆ ನಿಮ್ಮ ಸಂಗಡ. ಪ್ರಸಂಗ ಬಂದಾಗ ಉಪಯೋಗಿಸ ಬಹುದು. ಒಂದೊಂದು ಒಬ್ಬೊಬ್ಬನನ್ನೇ ಹಿಡಿಯುತ್ತದೆ.

ಗಾಳಿಯ ಹಡಗ ಬರಿದಾದಲ್ಲಿ ಅದು ಗಾಳಿಗೂಡಿ ಹೋಗುತ್ತದೆ.

ಮಣ್ಣಿನ ಹಡಗಕ್ಕೆ ಜನ ತುಂಬಿದರೆ ಅದು ಜಲಸಮಾಧಿ ಹೊಂದುತ್ತದೆ ಎಚ್ಚರಿಕೆ!"

ಇಷ್ಟು ಹೇಳಿ ಮುದುಕ ನನಗೆ ನಾವೆಯನ್ನೇರಲು ಕೈಸನ್ನೆ ಮಾಡಿದ.

ಹತ್ತಿದೆ.

ಹೊರಡುವುದಕ್ಕಾಗಿ ಸಂಕೇತ ಮಾಡಿದ.

ಎರಡೂ ನಾವೆಗಳು ಜೊತೆಯಾಗಿ ಹೊರಟವು.

ಪ್ರಯಾಣಿಕರು ಉಲ್ಲಾಸದಲ್ಲಿದ್ದರು. ಕೇಕೆ ಹಾಕುತ್ತಿದ್ದರು; ಸಿಳ್ಳು ಹೊಡೆಯುತ್ತಿದ್ದರು; ಧ್ವನಿ ತೆಗೆದು ಹಾಡುತ್ತಿದ್ದರು; ನಕ್ಕು ಕೆಲೆದಾಡು ತ್ತಿದ್ದರು.

ಮುದುಕನಿಗೆ 'ಹೋಗಿ ಬರುತ್ತೇವೆ' ಎಂದು ಕೈ ಮಾಡಿ ಮಾಡಿ ತಿಳಿಸುತ್ತಿದ್ದರು ಅನೇಕರು.

ನಾವೆಗಳನ್ನೆ ದಿಟ್ಟಿಸುತ್ತ ನಿಂತಿದ್ದ ಮುದುಕ ಕೆಲಹೊತ್ತಾದ ಮೇಲೆ ಮರೆಯಾದ.

ಎರಡೂ ನಾವೆಗಳು ಜೊತೆಯಾಗಿಯೆ ಸಾಗಿದವು.

ಕೊನೆಗೆ ಹತ್ತಿದ ಆ ನಾಲ್ಕಾರು ಜನರ ಗುಂಪು ಗುಜುಗುಜು ಪ್ರಾರಂಭಿಸಿತು. ಯಾವುದೋ ಒಂದು ಕಹಿ ಮಾತಿನ ವಿಷವನ್ನು ಗಾಳಿಯಲ್ಲಿ ಹರಿಬಿಟ್ಟರು. ಅದು ಅಲ್ಲಿದ್ದವರ ಕಿವಿಯನ್ನು ಸೇರಿತು. ಸೇರಿ ಹಬ್ಬಿತು. ಮಾತಿಗೆ ಮಾತು ಕೂಡಿದವು. ಒಂದಿದ್ದುದು ಎರಡಾಯಿತು. ಎರಡರಿಂದ ಅನಂತವಾಯಿತು. ಶಾಂತಿ ಅಶಾಂತಿಗೆ ಜಾಗ ಕೊಡಬೇಕಾಯಿತು. ಗೊಂದಲವೆದ್ದಿತು. ಒಬ್ಬರೊಬ್ಬರನ್ನು ನೋಡದಾದರು; ಒಬ್ಬರೊಬ್ಬರನ್ನು

ಕಾಣದಾದರು.

ಮುದುಕ ಹೇಳಿದ ಪ್ರಯಾಣಕಾಲದ ಎಚ್ಚರಿಕೆಯ ಮಾತುಗಳು ಎಚ್ಚರವಿಲ್ಲದ ಅವರ ಮನಸ್ಸಿನಿಂದ ಮರೆಯಾಗಿಬಿಟ್ಟಿದ್ದವು.

ಇಷ್ಟರಲ್ಲಿ ಆ ಗುಂಪು ಎದ್ದು ಹೋಗಿ ತಮ್ಮ ಹತ್ತಿರದ ರಬ್ಬರಿನಂತಹ ಒಂದು ಪದಾರ್ಥದಿಂದ ಈ ಹಡಗಕ್ಕೂ ಆ ಹಡಗಕ್ಕೂ ಓಡಾಡಲಿಕ್ಕೆ ಬರುವಂತೆ ಒಂದು ಹಾದಿಯನ್ನೇ ನಿರ್ಮಾಣ ಮಾಡಿದರು. ಜನ ಒಬ್ಬೊಬ್ಬರಾಗಿ ಎಗ್ದು ಆ ಹಡಗಕ್ಕೆ ಹೋಗಹತ್ತಿದರು. ಹೋದವರು ತಿರುಗಿ ಬರದಾದರು.

ಅಲ್ಪಾವಕಾಶದಲ್ಲಿಯೆ ನಾನಿದ್ದ ಗಾಳಿಯ ಹಡಗದಲ್ಲಿ ನನ್ನೊಬ್ಬನನ್ನು ಬಿಟ್ಟು ಯಾರೂ ಉಳಿಯಲಿಲ್ಲ. ನಾನೂ ಒಬ್ಬ ಅತ್ತ ಹೋದರೆ ತೀರಿತು, ಈ ಹಡಗವೂ ಗಾಳಿಗೂಡಿ ಹೋಗುವದು; ಆ ಹಡಗವೂ ಜಲಸಮಾಧಿ ಹೊಂದುವದು.

ಪ್ರಯಾಣಿಕರಾರಿಗೂ ಈ ಮಾತು ನೆನಪಾಗುವುದು ಶಕ್ಯವೆಂದು ತೋರಲಿಲ್ಲ. ಎಲ್ಲರೂ ನನಗೇ ಅತ್ತ "ಬಾ, ಬಾ" ಎಂದು ಕರೆಯುತ್ತಿದ್ದರು. "ಬರುವದಿಲ್ಲ" ಎಂದು ತಲೆ ಅಲ್ಲಾಡಿಸಿದೆ. ಅವರು ಕೇಳಲಿಲ್ಲ. ಆ ಗುಂಪು ಬಂದು ನನ್ನನ್ನು ಎತ್ತಿಕೊಂಡೇ ಆ ಕಡೆಗೆ ಹೋಯಿತು. "ಬೇಡ, ಬೇಡ! ಹಾಳಾಗುತ್ತೀರಿ!" ಎಂದು ಎಷ್ಟು ಹೇಳಿದರೂ ಕೇಳಲಿಲ್ಲ.

ಅತ್ತ ಹೋಗುವದೊಂದೇ ತಡ, ಗಾಳಿಯ ಹಡಗ ಗಾಳಿಗೂಡಿ ಹೋಯಿತು. ಮಣ್ಣಿನ ಹಡಗ ಜಲಸಮಾಧಿಯ ಹಾದಿ ಹಿಡಿಯಿತು.

ಸಮುದ್ರದ ನೀರು ಒಳನುಗ್ಗಿ ಜೋರಿನಿಂದ ಬರಹತ್ತಿತು. ಎಲ್ಲರೂ ಆಗ ಗಾಬರಿಯಾದರು. ಮರಣಕ್ಕಂಜಿ ಹೌಹಾರಿದರು. "ಹೋ!" ಎಂದು ಗೋಳಿಟ್ಟರು. 'ಏನು ಮಾಡಬೇಕು?' ಎಂದು ನನ್ನನ್ನು ಕೇಳಹತ್ತಿದರು.

"ಈಗೇನು ಮಾಡುವದು? ಅನುಭವಿಸುವದು. ನನ್ನನ್ನಾದರೂ ಅದರಲ್ಲಿಯೇ ಇರಗೊಟ್ಟಿದ್ದರೆ ನೀವೂ ಇರಬಹುದಾಗಿತ್ತು, ನಾನೂ ಇರಬಹುದಾಗಿತ್ತು; ಪ್ರಯಾಣವೂ ಸಾಗಬಹುದಾಗಿತ್ತು. ನನ್ನನ್ನು ಅಲ್ಲಿಂದ ಎತ್ತಿ ಬಿಡಿಸಿ ತರುವಾಗ ನಿಮಗೆ ಇದರರಿವು ಇರಲಿಲ್ಲ. ಹಾಳಾದಿರಿ, ಹಾಳು ಮಾಡಿದಿರಿ. ಈಗ ಕೈಮೀರಿ ಹೋಯಿತು." ಎಂದು ಬಾಯಿಂದ ಹೇಳಿದರೂ ಅವರ್ಕಾಲ ದೈನ್ಯಸ್ಥಿತಿಯು ಒಳಗೆ ಕರುಣೆಯನ್ನು ಹುಟ್ಟಿಸಿತ್ತು.

ಹಡಗದಲ್ಲಿ ನೀರು ಹೆಚ್ಚಾಯಿತು. ಜನ ಪ್ರಾಣಸಂಕಟಕ್ಕಾಗಿ ಒದ್ದಾಡ ಹತ್ತಿತು. ಗಂಡು-ಹೆಣ್ಣು, ಹಿರಿಯರು-ಕಿರಿಯರು, ಮುದುಕರು-ತದಕರು, ಹುಡುಗರು-ಹುಪ್ಪಡಿ ಎಲ್ಲರ ಮೇಲೂ ಸಾವಿನೂರಿನ ದಂಡು ಬಂದು ನಡೆ ಯಿಸಿದ ಆ ಅತ್ಯಾಚಾರವನ್ನು ಕಣ್ಣುಟ್ಟ ನೋಡಿ ಒಳಗಿನ ಜೀವಕ್ಕೆ ಕಲಮಲ ವಾಯಿತು. ಏನಾದರೂ ಆಗಿ ಎಲ್ಲರೂ ಬದುಕಿ ಪಾರಾಗುವಂತಾಗಬೇಕೆಂದು ಮನಸ್ಸು ಲೆಕ್ಕ ಹಾಕಹತ್ತಿತು. ಆದೇ ಹೊತ್ತಿಗೆ ಮುದುಕ ಹೇಳಿದ 'ಜೀವರಕ್ಷಾ ಹೋಡಿ'ಗಳ ನೆನಪಾಯಿತು. ಅತ್ತಿತ್ತ ಹುಡುಕಹತ್ತಿದೆ. ಅಲ್ಲಿಯೆ ಒಂದು ಮೂಲೆಯಲ್ಲಿದ್ದದ್ದು ಕಂಡಿತು.

ಎಲ್ಲರನ್ನೂ ಕರೆದು ತೋರಿಸಿ ಅವನ್ನು ಉಪಯೋಗಿಸಬಹುದೆಂದು ಹೇಳಿದೆ. "ಒಂದೊಂದರಲ್ಲಿ ಒಬ್ಬರೇ ಮಾತ್ರ ಇರಬೇಕು. ಹೆಚ್ಚಾದರೆ ಮುಳುಗುತ್ತದೆ." ಎಂದು ಎಚ್ಚರಿಸಿದೆ. ಆದರೂ ಕೆಲವರು ಕೇಳದೆ ಇಬ್ಬಿಬ್ಬರು, ಮೂರುಮೂರು ಜನ ಅವುಗಳಲ್ಲಿ ಕುಳಿತು ಮುಳುಗಿ ಹೋದದ್ದನ್ನೂ ಕಂಡೆ.

ಮಣ್ಣಿನ ಹಡಗ ಜಲಸಮಾಧಿ ಹೊಂದಿತು.

ಅಸಂಖ್ಯ ಪ್ರಯಾಣಿಕರಿಗೀಗ ಅಸಂಖ್ಯ ದಿಕ್ಕುಗಳಾದವು. ಎಲ್ಲರ ಪ್ರಯಾಣದ ದಿಕ್ಕೂ ಬೇರೆಬೇರೆಯಾಯಿತು. ಒಂದೇ ದಿಕ್ಕಿಗೆ ಎಲ್ಲರನ್ನೂ ಒಯ್ಯುತ್ತಿದ್ದ ಸೂತ್ರ ಈಗ ಹರಿದಿತ್ತು. ಗಾಳಿ ಒಯ್ದತ್ತ ಹೋಗಬೇಕೆ ಹೊರತು, ತಾವು ಬಯಸಿದತ್ತಲ್ಲ.

ಸಮುದ್ರದ ತುಂಬೆಲ್ಲ ಈಗ ಪ್ರಯಾಣಿಕರೇ ಕಾಣಹತ್ತಿದರು. ಎರಡು ಹೋಗಿ ಅಸಂಖ್ಯವಾಗಿತ್ತು.

ನಾನೂ ಒಂದು ಜೀವರಕ್ಷಾ ಹೋಡಿಯಲ್ಲಿ ಕುಳಿತು ಸಾಗಿದತ್ತ ಸಾಗ ಲೆಂದು ಅದನ್ನು ಗಾಳಿಯ ಕೈಗೆ ಒಪ್ಪಿಸಿಬಿಟ್ಟೆ.

"ತಿರುಗಿ ಕೂಡುವ ಆಶೆಯನ್ನು ತೊರೆಗು ಒಬ್ಬರಿಂದೊಬ್ಬರು ಅಗಲು ತ್ತಿದ್ದೇವೆ!

ಎಂದೋ, ಯಾವಾಗೋ, ಎಲ್ಲಿಯೋ ಭೆಟ್ಟಿ ಇನ್ನು?

ಹಿಂದೆ ಕೂಡಿದ್ದದ್ದರ ನೆನವೇ ಮುಂದಿನ ಹಾದಿಗೆ ನಮಗಿನ್ನು ಬೆಳಕು!

ಅಯ್ಯೋ! ಅಗಲಿಕೆಯ ಈ ಪ್ರತ್ಯಕ್ಷ ದುಃಖ ಅಸಹನೀಯ!

ಅಸಹನೀಯ !

ಹೋಗಿಬರುತ್ತೇವೆ! ಹೋಗಿಬರುತ್ತೇವೆ !

ಮರೆಯಬೇಡಿರಿ ! ಮರೆಯಬೇಡಿರಿ !

ಎಲ್ಲಾ ಮರೆತುಬಿಡಿರಿ! ಮನಸ್ಸಿನಲ್ಲಿಡಬೇಡಿರಿ!" ಎಂಬರ್ಥದ ವೇದನೆ ತುಂಬಿದ ಮಾತುಗಳು ಎಲ್ಲರಿಂದಲೂ ಹೊರಟು ಅಲ್ಲಿಯ ಆಕಾಶವನ್ನು ತುಂಬಿದವು.

ಜೋರಾದ ಗಾಳಿ ಬಂದು ಆಕಾಶದಲ್ಲಿ ತುಂಬಿದ್ದ ಆ ಮಾತುಗಳನ್ನೂ ಆ ಹೋಡಿಗಳನ್ನೂ ಬೇರೆ ಬೇರೆ ದಿಕ್ಕಿಗೆ ಒಯ್ದಿತು.

ನನ್ನ ಹೋಡಿಯೂ ಗಾಳಿ ಒಯ್ದತ್ತ ತೆರೆಯೇರಿ ಇಳಿದು ಮುಂದೆ ಸಾಗಿತು. ( ೧೫–೮–೧೯೨೮ )

ರಾತ್ರಿಯಾಯಿತು. ಬೆಳದಿಂಗಳು ಬಂತು. ನಡೆದುಹೋದ ಘಟನೆಗಳನ್ನು ಒಂದೊಂದಾಗಿ ನೆನೆಯುತ್ತ, ಮನಸ್ಸನ್ನು ಎಲ್ಲೆಲ್ಲಿಯೊ ಹರಿಬಿಟ್ಟು ಚಂದ್ರನನ್ನೆ ನೋಡುತ್ತ ಕುಳಿತೆ.

ನೋಡುತ್ತ ನೋಡುತ್ತ ಕಣ್ಣುಗಳು ತಾವಾಗಿಯೆ ಮುಚ್ಚಿಕೊಂಡವು. ಕನಸಿನ ಲೋಕವನ್ನು ಮುಚ್ಚಿದ್ದ ಕಪ್ಪು ತೆರೆಯು ಸರಿಯಿತು.

ನಾಟಕ ಪ್ರಾರಂಭವಾಯಿತು.

ಅದರಲ್ಲಿ ನಟ ಪ್ರೇಕ್ಷಕ ಎರಡೂ ನಾನೇ ಆಗಿದ್ದೆ.

## ಪ್ರತಿರೂಪ

ನಾನೊಬ್ಬ ದೊಡ್ಡ ಮಹಾರಾಜನ ಮಗನಾಗಿದ್ದೆ. ನನಗೊಬ್ಬ ಅಣ್ಣನೂ ಒಬ್ಬ ತಂಗಿಯೂ ಇದ್ದರು. ರಾಜನಾಗುವುದಕ್ಕೆ ಬೇಕಾಗುವ

ವಿದ್ಯೆಗಳನ್ನೆಲ್ಲ ಕಲಿಸುವ ಅನುಕೂಲತೆಗಳನ್ನು ನನ್ನ ತಂದೆಯವರು ಇಬ್ಬರಿಗೂ ಒದಗಿಸಿದ್ದರು. ರಾಜ್ಯಾಧಿಕಾರ ಕಾಮಧೇನುವಿನಂತೆ ನಾವು ಬೇಡಿದ್ದನ್ನು ಹಿಡಿದುಕೊಂಡು ನಿಂತಿತ್ತು.

ಕುದುರೆ ಹತ್ತುವುದನ್ನು ಕಲಿಸಿದರು. ಬಾಣ ಹೊಡೆಯುವುದನ್ನು ಕಲಿಸಿದರು. ಖಡ್ಗಯುದ್ಧ ಮಾಡಲು ಕಲಿಸಿದರು. ಬೇಟೆಯಾಡಲು ಕಲಿಸಿದರು. ರಾಜಪುತ್ರನಿಗೆ ಬೇಕಾಗುವ ರಾಜನೀತಿಯನ್ನು ಹೇಳಿಕೊಟ್ಟರು. ಲಲಿತಕಲೆಗಳಲ್ಲಿಯೂ ಪ್ರವೇಶಮಾಡಿಸಿದರು.

ಇನ್ನೂ ಹುಡುಗನಿದ್ದಾಗೊಮ್ಮೆ ನಾನು ಬೇಟೆಯಾಡುವುದಕ್ಕೆ ಹೋಗಿದ್ದೆ. ಒಂದು ಕಾಡುಹಕ್ಕಿ ತನ್ನ ಗೂಡಿನಿಂದ ಹೊರಬಿದ್ದು ಬಂದು ಒಂದು ಚಿಕ್ಕ ಕಂಟಿಯ ಮೇಲೆ ಕುಳಿತಿತು. ಅದರ ಚೆಲುವು ನನ್ನ ಕಣ್ಣನ್ನು ಸೆಳೆಯಿತು. ಕಲ್ಲೊಂದನ್ನು ತೆಗೆದುಕೊಂಡು ಅದಕ್ಕೆ ಎಸೆದೆ. ಹಾರಿಹೋಯಿತು. ಕಲ್ಲು ತಾಕಲಿಲ್ಲ. ಬೆನ್ನು ಹತ್ತಿದೆ. ಗಿಡದಿಂದ ಗಿಡಕ್ಕೆ ಹಾರಿ ಹಾರಿ ದಣಿದು, ಒಂದು ಮಾವಿನ ಗಿಡದ ಟೊಂಗೆಯ ಮೇಲೆ ಹೋಗಿ ಕೂತಿತು. ಮೆಲ್ಲಗೆ ಹೆಜ್ಜೆಯಿಡುತ್ತ ಗುರಿಯ ಅಳತೆಯಲ್ಲಿ ಅದು ಬರುವ ತನಕ ಹೋಗಿ, ಅಲ್ಲಿಂದ ಬಿಲ್ಲಿನ ಹೆದೆಯನ್ನು ಏರಿಸಿದೆ. ಗುರಿಯಿಟ್ಟು ಇನ್ನು ಬಾಣ ಬಿಡುವವನು; ಅಷ್ಟರಲ್ಲಿ ಟೊಂಗೆಯ ಮೇಲೆ ಕುಳಿತಿದ್ದ ಹಕ್ಕಿ ಮಾಯವಾಗಿ ಅದರ ಜಾಗದಲ್ಲಿ ನನ್ನಂತಹದೇ ಒಂದು ಹುಡುಗ, ನನ್ನ ಹಾಗೆಯೆ ಬಿಲ್ಲಿಗೆ ಬಾಣ ಹೂಡಿ ನನಗೆದುರಾಗಿ ನಿಂತಿದ್ದು ಕಂಡಿತು. ಏನೂ ತಿಳಿಯದೆ ನಕ್ಕೆ. ಆ ಹುಡುಗನೂ ನಕ್ಕ. ಕಣ್ಣು ಕೆರಳಿಸಿ, ತುಟಿ ಕಚ್ಚಿದೆ. ಅದೂ ಹಾಗೇ ಮಾಡಿತು. ಯಾರಾದರೂ ನನಗೇ ಕನ್ನಡಿ ಹಿಡಿದರಬಹುದೇ? ಎಂದು ಅತ್ತಿತ್ತ ನೋಡಿದೆ. ಯಾರೂ ಕಾಣಲಿಲ್ಲ. ಬಾಣ ಬಿಟ್ಟೆ. ಅದೂ ಬಿಟ್ಟಂತಾಯಿತು. ಆದರೆ ಬಿಟ್ಟ ಬಾಣ ಮಾತ್ರ ಕಾಣಿಸಲಿಲ್ಲ. ಹುಡುಗ ಮಾಯವಾಗಿದ್ದ. ಆ ಕಾಡುಹಕ್ಕಿ ಬಾಣಕ್ಕೆ ತುತ್ತಾಗಿ ಕೆಳಗೆ ಬಿತ್ತು.

ಹದಿನಾರು ವರ್ಷದವನಾದಾಗೊಮ್ಮೆ ಬೇಟೆಯಾಡಲು ಅಡವಿಗೆ ಹೋಗಿದ್ದೆ. ಸಂಗಡ ಬಂದಿದ್ದ ಪರಿವಾರವೆಲ್ಲ ಎಲ್ಲಿಯೊ ಹಿಂದೆ ಉಳಿದಿತ್ತು. ನಾನೊಬ್ಬನೇ ಕುದುರೆಯ ಕಡಿವಾಣವನ್ನು ಸಡಿಲುಬಿಟ್ಟು, ಹೋದತ್ತ

ಹೋಗಲೆಂದು ಸುಮ್ಮನೆ ಕುಳಿತು ಸಾಗಿದ್ದೆ. ಆಗ ಸಮೀಪದಲ್ಲಿಯೆ ಸ್ವಚ್ಛ ವಾದ ಒಂದು ಸರೋವರದ ದಂಡೆಯ ಮೇಲಿನ ಹಸಿರಲ್ಲಿ ಒಂದು ಚಿಗರಿಯ ಮರಿಯು ಮೇಯುತ್ತ ನಿಂತಿರುವುದನ್ನು ನೋಡಿದೆ. ಕುದುರೆಯನ್ನು ನಿಲ್ಲಿಸಿ ಕೆಳಗಿಳಿದು ಸಾವಕಾಶವಾಗಿ ಒಂದು ಗಿಡದ ಮರೆಯಿಂದ ಮತ್ತೊಂದು ಗಿಡದ ಮರೆಗೆ ಸುಸುಳುತ್ತ ಕೊನೆಗೆ ಒಂದು ಆಲದ ಮರದ ಹಿಂದೆ ಹೋಗಿ ನಿಂತುಕೊಂಡೆನು. ಚಿಗರಿಯ ಮರಿಗೆ ನಾನು ಬಂದದ್ದು ತಿಳಿದಂತೆ ತೋರ ಲಿಲ್ಲ. ಅದು ನಿರ್ಭಯವಾಗಿ ಹುಲ್ಲನ್ನು ಮೇಯುತ್ತ ನಿಂತುಕೊಂಡಿತ್ತು. ಮೆಲ್ಲಗೆ ಬಾಣ ಹೂಡಿದೆ. ನಿರಿ ನೋಡಿದೆ. ಇನ್ನು ಜಗ್ಗಿ ಬಿಡುವವನು; ಅಷ್ಟರಲ್ಲಿ ಚಿಗರಿ ಮಾಯವಾಗಿತ್ತು. ಅದರ ಜಾಗದಲ್ಲಿ ನನ್ನದೇ ಪ್ರತಿರೂಪ ಬಿಲ್ಲಿಗೆ ಬಾಣ ಹೂಡಿ ನನಗೆದುರಾಗಿ ನಿಂತಿತ್ತು. ಒಂದು ಕ್ಷಣ ಮೈ ಜುಮ್ಮೆಂದಿತು. ಕೂದಲು ಸೆಟ್ಟಗೆ ನಿಂತವು. ನನಗೆ ತಿಳಿಯದೆಯೆ, ಬಿಲ್ಲನ್ನು ಬಿಟ್ಟು ಹೊರಟುಹೋಗಿತ್ತು ಬಾಣ. ಪ್ರತಿರೂಪ ಮಾಯ ವಾಯಿತು. ಚಿಗರಿ ಮರಿಯು ಸತ್ತು ಬಿದ್ದಿತ್ತು.

ಇನ್ನೊಂದು ಸಲ ಹುಲಿಯ ಬೇಟೆಗೆಂದು ಹೋದಾಗಲೂ ಇದೇ ರೀತಿಯಾಗಿತ್ತು.

ಈ ಘಟನೆಗಳಿಂದ ನನ್ನಲ್ಲಿ ಯಾವ ತರಹದ ಭಾವೋದ್ರೇಕವೂ ಆದದ್ದು ನನಗಾಗ ಕಂಡುಬರಲಿಲ್ಲ.

ಹರೆ ಮಿಕ್ಕಿ ಹಿರಿತನ ಬಂದಿತ್ತು. ಎಷ್ಟೋ ಯುದ್ಧಗಳನ್ನಾಡಿವಿ ಜಯ, ಕೀರ್ತಿ ಸಂಪಾದಿಸಿದ್ದೆ. ನನ್ನ ಹೆಸರು ಕೇಳಿದರೂ ಸಾಕು, ವೈರಿಗಳು ನಡು ಗುವ ಹಾಗೆ ರಣಭಯಂಕರನಾಗಿದ್ದೆ. ನನ್ನ ಪರಾಕ್ರಮಕ್ಕೆ ಮೆಚ್ಚಿ ಮಹಾ ರಾಜರು ನನ್ನನ್ನು ಮುಖ್ಯಸೇನಾನಾಯಕನನ್ನಾಗಿ ಮಾಡಿದರು. ಕೊಲ್ಲು ವದು, ಕೊಲ್ಲಿಸುವದು ನನ್ನ ನಿತ್ಯಕರ್ಮವಾಗಿಬಿಟ್ಟಿತು.

ಒಂದು ರಾತ್ರಿ ಯುವರಾಜ ( ಅಣ್ಣ ! ) ಮಲಗಿದಲ್ಲಿಗೆ ವೇಷ ಬದಲಿಸಿ ಕೊಂಡು ಹೋದೆ. ಕಾವಲುಗಾರರನ್ನು ಹೆಡಮುರಿಗೆ ಕಟ್ಟಿ ಒಗೆದೆ. ಆತ ಮಲಗಿದ ಮಂಚದ ಹತ್ತಿರ ಹೋಗಿ ಕೈಯಲ್ಲಿಯ ಖಡ್ಗವನ್ನು ಮೇಲಕ್ಕೆತ್ತಿ ಕೆಳಗೆ ನೋಡಿದೆ. ಅಣ್ಣ ಕಾಣಿಸಲಿಲ್ಲ. ಅವನ ಜಾಗದಲ್ಲಿ ಒಂದು ಕೂಸು—ನನ್ನ ಮುಖದ್ದೇ—ಕುಲುಕುಲು ನಗುತ್ತ ಮಲಗಿತ್ತು. ಅದರ ಕೈಯಲ್ಲಿಯೂ

ಪುಟ್ಟ ಖಡ್ಗವೊಂದಿತ್ತು. ನಾನೆತ್ತಿದಂತೆಯೆ ಎತ್ತಿತ್ತು. ಅದನ್ನು ನೋಡಿ ಮೇಲಕ್ಕೆತ್ತಿದ ನನ್ನ ಕೈ ಅಲ್ಲಿಯೆ ಒಂದು ಕ್ಷಣ ನಿಂತಿತು, ಅಷ್ಟೆ. ಮುಂದೆಲ್ಲಾ ಸರಿಹೋಯಿತು. ಖಡ್ಗ ಕೊರಳಿಗೆ ಬಿತ್ತು. ಅಣ್ಣ ಹೊರಟು ಹೋದ. ರಾಜ್ಯ ನನ್ನ ಪದರಲ್ಲಿ ಬಿತ್ತು.

ನನ್ನ ತಂಗಿಯಿಂದಲೆ ನನ್ನ ಈ ಕಾರಸ್ಥಾನವೆಲ್ಲ ಮಹಾರಾಜರ ಕಿವಿಯ ವರೆಗೆ ಹೋಗಿ ಮುಟ್ಟಿತು. ಮಹಾರಾಜರು ನನ್ನನ್ನು ಕರೆಯಿಸಿದರು ಏಕಾಂತ ದಲ್ಲಿ. “ಈ ಮನುಷ್ಯರಕ್ತದ ಸವಿ ಹತ್ತಿದರೆ ರಾಜ್ಯಕ್ಕೆ ಕ್ಷೇಮವಲ್ಲ. ಅಳಿಗಾಲಕ್ಕೆ ಆಮಂತ್ರಣ ಕೊಟ್ಟಂತೆ. ಇದು ಒಳಿತಲ್ಲ. ಈ ದಾರಿ ಬಿಡು.” ಎಂದು ಸೌಮ್ಯವಾಗಿದ್ದರೂ ಗಂಭೀರಧ್ವನಿಯಲ್ಲಿ ಕಣ್ಣಿಗೆ ನೀರು ತಂದು ಹೇಳಿದರು.

“ಯುದ್ಧ ನನಗಿದರ ಸವಿ ಹಚ್ಚಿತು. ಸವಿ ಒಳಗೆಲ್ಲ ಭೇದಿಸಿಬಿಟ್ಟಿದೆ. ಅದರಿಂದ ಬಿಡುಗಡೆಯಿಲ್ಲ. ನಾಶವಾದರೂ ಆ ದಾರಿಯಲ್ಲಿಯೆ ಆಗಬೇಕಿನ್ನು. ಬೇರೆ ಉಪಾಯವಿಲ್ಲ.” ಎಂದು ರಾಜಕಾರಣಿಯ ಸ್ಪಷ್ಟತೆ ಕುಶಲತೆಗಳಿಂದ ಉತ್ತರಕೊಟ್ಟು ಹೊರಬಿದ್ದು ಬಂದರೂ ಎದೆಯ ಒಂದು ಮೂಲೆಯಲ್ಲಿ ‘ಅವರು ಹೇಳಿದ ಮಾತು ಸರಿಯಿದೆ’ ಎಂದು ಒಂದು ಧ್ವನಿ ಲೊಟಗುಡುತ್ತಿತ್ತು. ‘ರಾಜನಾಗಬೇಕು, ರಾಜ್ಯವಾಳಬೇಕು, ರಾಜವೈಭವದಿಂದ ಮೆರೆಯಬೇಕು’ ಎಂಬ ಮಹತ್ವಾಕಾಂಕ್ಷೆಯ ಗುಂಗಿನಲ್ಲಿ ಆ ಲೊಟಗುಟ್ಟುವ ಧ್ವನಿ ಕೇಳಿಸಲಿಲ್ಲ.

ಬೇಗನೆ ರಾಜನಾಗುವದು ನನಗೆ ಬೇಕಾಗಿತ್ತು. ಮಹಾರಾಜರ ಇರವೆ ಅದಕ್ಕೆ ಅಡ್ಡಾಗಿ ನಿಂತಿತ್ತು. ಸರಿ, ಅವರನ್ನು ವನವಿಹಾರಕ್ಕೆಂದು ಮನವೊಲಿಸಿ ಕರೆದುಕೊಂಡು ಹೋಗಿ ಪೂರ್ವಸಿದ್ಧತೆಯಿಂದ ಒಂದು ಹುಲಿಯ ಬಾಯಿಗೆ ಅವರು ತುತ್ತಾಗುವಂತೆ ಮಾಡಿದೆನು.

ಜನತೆಗೆ ಇದೊಂದೂ ತಿಳಿಯದು. ಅವರ ಕಣ್ಣಲ್ಲಿ ನಾನಿನ್ನೂ ನಿರ್ಮಲ ಚರಿತ, ಶುದ್ಧಾತ್ಮಾ, ಸಾರ್ವಭೌಮ, ದೇವರ ದೇವ ಆಗಿದ್ದೇನೆ.

ಅರಸನಾದೆ. ನನಗೆ ಉದಾರನೆಂದರು; ಶೂರನೆಂದರು; ಧೀರನೆಂದರು; ಅರಿಕೇಸರಿಯೆಂದರು; ಸಾರ್ವಭೌಮನೆಂದರು; ದೇವರ ದೇವನೆಂದರು. ನಾನುಸುರಿದ್ದೆ ಸರ್ವಮಾನ್ಯವಾಯಿತು.

ಆದರೂ ಸಂತಪ್ತಹೃದಯದ ಕರುಳುಗಳಿಂದ ಹೊಸೆದ ಹಗ್ಗವೊಂದು ನನ್ನ ಕೊರಳಿಗೆ ಉರುಲಾಗಿ ಬರಲಿದೆಯೆಂಬುದು ನನ್ನ ಕನಸುಮನಸಿನಲ್ಲಿಯೂ ಹೊಳೆದಿರದಿಲ್ಲ.

ಪ್ರಜೆಗಳಲ್ಲಿ ಬರಬರುತ್ತ ಅತೃಪ್ತಿಯ ಬೇಗೆಯು ಹೆಚ್ಚಾಗುತ್ತ ನಡೆಯಿತು. ಅದನ್ನು ಶಾಂತಮಾಡಲು ಸಾಮೋಪಾಯವನ್ನು ಬಿಟ್ಟು ದಂಡೋಪಾಯವನ್ನೆ ಸ್ವೀಕರಿಸಿದೆ. ಅದರಿಂದಂತೂ ಅಶಾಂತಿ ಇನ್ನೂ ಹೆಚ್ಚಾಯಿತು. ನೀತಿಯು ನೆಲೆಗೆಟ್ಟಿತು. ಅಸತ್ಯವೇ ಉಪಜೀವನಕ್ಕೆ ಮಾರ್ಗವಾಯಿತು. "ನಾನು ಏನು ಮಾಡುವುದಕ್ಕೂ ಅಧಿಕಾರವಿದೆ; ನಾನು ಮಾಡಿದ್ದೇ ಸರಿ." ಎಂಬ ಭ್ರಾಂತಿ ಎಲ್ಲರನ್ನು ಮರುಳುಮಾಡಿತ್ತು. ಅದರಿಂದ ಆಡಳಿತ ಸಡಿಲಾಯಿತು. ಸುಡುವ ಮನೆಯ ಗಳ ಹಿರಿದಂತೆ ಕೈಗೆ ಸಿಕ್ಕದ್ದನ್ನು ನುಂಗುವ ಪ್ರವೃತ್ತಿ ಅಧಿಕಾರಿಗಳಲ್ಲಿ ಹೆಚ್ಚಾಯಿತು. ವಂಚನೆಯೆ ವ್ಯವಹಾರದ ನೀತಿಯಾಯಿತು. ಈ ಅತೃಪ್ತಿಯ ಬೀಜ ಅಂತಃಪುರದಲ್ಲಿಯೆ ಹುಟ್ಟಿತ್ತು. ನನ್ನ ಕಾರಸ್ಥಾನಗಳನ್ನೆಲ್ಲ ಕಂಡುಹಿಡಿದ ನನ್ನ ತಂಗಿಯೆ ನನ್ನ ವಿರುದ್ಧ ನಿಂತಿದ್ದಳು. ನನ್ನ ವಿಷಯಲೋಲುಪತೆ, ಐಶ್ವರ್ಯಪ್ರದರ್ಶನ, ನಾನು ನನ್ನ ರಾಜ್ಯಲಾಲಸೆಗೆ ಕೊಟ್ಟ ಆಹುತಿ, ಇವೆಲ್ಲವುಗಳಿಂದ ಅವಳ ತಲೆ ತಿರುಗಿತ್ತು. ಪ್ರಜೆಗಳ ಬೆನ್ನುಕಟ್ಟಿ ನನ್ನೊಡನೆ ಬಂಡೆಬ್ಬಿಸಿದ್ದಳು. ಕೊನೆಗೆ ನನ್ನ ಹತ್ತಿರವೆ ಬಂದು "ನೀನು ರಾಜ್ಯ ಬಿಡು; ನೀನು ಆಳಲಾರಿ" ಎಂದು ಸ್ಪಷ್ಟವಾಗಿ ಹೇಳಿದಳು. ಅಂದರೂ ಹಟಕ್ಕೆ ಬಿದ್ದು ನಾನವಳ ಮಾತು ಕೇಳಲಿಲ್ಲ. ಮರುದಿನದಿಂದ ಅರಮನೆಯ ವ್ಯವಹಾರವೆಲ್ಲ ನಿಂತೇಹೋಯಿತು. ದಾಸಿಯರೆಲ್ಲ ಮಾಯವಾಗಿದ್ದರು. ದ್ವಾರಪಾಲಕರೂ ಮರೆಯಾಗಿದ್ದರು. ರಾಜನನ್ನು ಮುಂಜಾನೆ ಎಬ್ಬಿಸುವವರಿಲ್ಲ; ಕರೆದೊಡನೆ 'ಜೀಯ' ಎನ್ನುವವರಿಲ್ಲ. ದಾರಿ ತೋರಿಸುವವರಿಲ್ಲ. ರಾಜಸೇವಾಕಾರ್ಯವೆಲ್ಲ ನಿಂತುಹೋಯಿತು. ಏನು ಮಾಡುವುದಕ್ಕೂ ತೋಚದೆ ತಂಗಿಯನ್ನೆ ಕರೆಕಳಿಸಿದೆ. ಎಲ್ಲಾ ತಿಳಿದುಕೊಂಡೆ. ಅವಳನ್ನೆ ಉಪಾಯ ಸೂಚಿಸಲು ಕೇಳಿಕೊಂಡೆ. ಅವಳು ಸೂಚಿಸಿದಂತೆ ನಡೆಯಲು ಒಪ್ಪಿಕೊಂಡೆ. ಕೂಡಲೆ ಅರಮನೆಯ ವ್ಯವಹಾರವೆಲ್ಲ ಮತ್ತೆ ಸುರುವಾಯಿತು. ನನ್ನ ತಂಗಿ ನನ್ನ ಹಾದಿಯಲ್ಲೀಗ ಆತಂಕವಾಗಿ ನಿಂತಳು.

ಅಂದೇ ರಾತ್ರಿ ನನ್ನ ತಂಗಿ ಮಲಗಿದಲ್ಲಿಗೆ ಕದ್ದು ಹೋದೆ. ನಾನು ಹೋದಾಗ ಮಲಗಿದ್ದಳು. ತಿಳಿಯದಂತೆ ಹತ್ತಿರ ಹೋಗಿ ಅವಳ ನಸುವೆ ತೆರೆದ ಬಾಯಲ್ಲಿ ಒಂದು ಹನಿ ವಿಷ ಬಿಟ್ಟೆ. ಆ ಹೊತ್ತಿಗೆ ಮತ್ತೆ ಹಿಂದಿನಂತೆ ಒಂದು ಕೂಸು ಕಂಡಿತು. ನಾನು ಬಿಟ್ಟ ವಿಷವನ್ನು ಅದೇ ಕುಡಿದು ಮಾಯ ವಾಯಿತು. ತಂಗಿಯು ಆ ಉಗ್ರವಿಷದಿಂದ ಒಂದೇ ಕ್ಷಣದಲ್ಲಿ ಒದ್ದಾಡಿ ಪ್ರಾಣಬಿಟ್ಟಳು.

ರಾಜ್ಯದಾಡಳಿತ ಹತೋಟಿಗೆ ಬಂತು. ಎಲ್ಲಾ ಸುಸೂತ್ರವಾಯಿತು. ಜನ ಭಯದಿಂದ ನನ್ನನ್ನು ಗೌರವಿಸಹತ್ತಿದರು. ಮುಂದೆ ಮೂವತ್ತು ವರ್ಷಗಳ ವರೆಗೆ ರಾಜ್ಯವಾಳಿದೆನು. ಮೂವತ್ತು ವರುಷಗಳು ಮೂವತ್ತು ಕ್ಷಣಗಳಂತೆ ಜಾರಿದವು. ಮುಪ್ಪು ನನ್ನನ್ನು ಮುತ್ತಿತ್ತು. ರಾಜ್ಯವನ್ನಾಳುವ ಆಶೆಗಳೆಲ್ಲ ಅಳಿದು ಹೋದವು. ಮೂವತ್ತು ವರ್ಷದ ಹಿಂದಿನ ನೆನಪುಗಳು ಒಂದೊಂದಾಗಿ ಬರತೊಡಗಿದವು. ಒಳಗಿನ ಜೀವವು ಏನನ್ನೊ ಕಳಕೊಂಡ ವರಂತೆ ಹುಡುಕಾಡಹತ್ತಿತು. ತಂಗಿಯ ಬಾಯಲ್ಲಿ ವಿಷ ಬಿಡುವಾಗ, ಅಣ್ಣನ ಕೊರಳಿಗೆ ಕತ್ತಿಯಿಂದ ಇರಿಯುವಾಗ, ಮಹಾರಾಜರನ್ನು ಹುಲಿಯ ಬಾಯಿಗೆ ಕೊಡುವಾಗ, ಚಿಗರಿಗೆ ಬಾಣ ಬಿಡುವಾಗ, ಹಕ್ಕಿಯನ್ನು ಹೊಡೆಯುವಾಗ, ಕಂಡ ಆ ಪ್ರತಿರೂಪದ ನೆನಪಾಯಿತು. ‘ ಅದೇನು ? ಅದೇಕೆ ಹಾಗಾಯಿತು ? ಅದರ ಅರ್ಥವೇನು ? ’ ಎಂದು ಯೋಚಿಸಹತ್ತಿದೆ. ಏನೋ ತಿಳಿದಂತೆ ತಿಳಿಯದಂತೆ ಎರಡೂ ಎನಿಸಹತ್ತಿತು. ‘ ಆ ಕೂಸನ್ನಾದರೂ ಇನ್ನೊಮ್ಮೆ ಕಂಡೇನೆಯೇ ? ’ ಎಂದುಕೊಂಡೆ. ಅದು ಕಾಣಿಸಬೇಕಾದರೆ ಯಾರನ್ನಾದರೂ ಮತ್ತೆ ಕೊಲ್ಲಬೇಕು. ಇನ್ನು ಯಾರನ್ನು ಕೊಲ್ಲಬೇಕು ? ನನ್ನನ್ನೆ ಏಕೆ ಕೊಂದುಕೊಳ್ಳಬಾರದು ? ’ ಎಂದು ನಿಶ್ಚಯಿಸಿ ಒಂದು ಮಧ್ಯರಾತ್ರಿ ಯಾರ ಸದ್ದೂ ಇಲ್ಲದಾಗ ಕಿರುಗತ್ತಿಯಿಂದ ಎದೆಗೆ ಹೊಡೆದುಕೊಳ್ಳಬೇಕೆಂದು ಸಿದ್ಧ ನಾದೆ. ಅಷ್ಟರಲ್ಲಿ ಆ ಕೂಸು ಕಾಣಿಸಿಕೊಂಡಿತು. ನೋಡಿ ಸಂತೋಷವಾಗಿ ಕೈಯಲ್ಲಿಯ ಕಿರುಗತ್ತಿಯನ್ನು ಕೆಳಕ್ಕೆ ಬಿಟ್ಟೆ. ಕೂಸೂ ಬಿಟ್ಟಿತು. ಕೂಸನ್ನೆ ನೋಡುತ್ತ ನಿಂತೆ. ಅದೇ ಮಾತಿಗೆ ಪ್ರಾರಂಭಮಾಡಿತು.

“ ನಿನಗೆಷ್ಟು ವಯಸ್ಸಾಯಿತು ? ”

“ ನಾಲ್ಕಿಪ್ಪತ್ತರ ಮೇಲೆ ಐದಾಯಿತು.”

"ಆ ಮೊದಲು ನೀನೆಲ್ಲಿದ್ದೆ ?"

"ನನಗದು ಗೊತ್ತಿಲ್ಲ."

"ಈಗ ಹೊರಟುದೆಲ್ಲಿಗೆ ?"

"ಅದೂ ಗೊತ್ತಿಲ್ಲ ನನಗೆ."

"ನೀನಾರು, ಅದಾದರೂ ಗೊತ್ತುಂಟೇ ?"

"ಅದೂ ತಿಳಿಯದು."

"ನನ್ನನ್ನು ಕಾಣಬೇಕೆಂಬಾಸೆ ಈಗೇಕಾಯಿತು ?"

"ಹೇಳಲರಿಯೆ."

"ಆಶೆ ಇದೆಯೇ ಇನ್ನೂ ?"

"ಕಡಿಮೆಯಾಗಿದೆ."

"ಮೊದಲೇ ಏಕೆ ಅದನ್ನು ಬಿಡಲಿಲ್ಲ ?"

"ರಾಜ್ಯಮೋಹ ನುಂಗಿತ್ತು ನನ್ನನ್ನು."

"ಈಗ ?"

"ಉಗುಳಿತು."

"ನೀನು ನನ್ನನ್ನು ಕೊಲ್ಲಲು ಬಯಿಸಿದೆ. ಆದರೆ ನಿನ್ನನ್ನೇ ನೀನು ಕೊಂದುಕೊಂಡೆ. ನೋಡಿಕೋ ಬೇಕಾದರೆ." ಎಂದು ನುಡಿದು ಕೂಸು ಮಾಯವಾಯಿತು. ನನ್ನ ಎದೆಯನ್ನೆ ನೋಡಿಕೊಂಡೆ. ಒಳಗೆ, ಅವಯುವಗಳೆಲ್ಲಾ ಕತ್ತರಿಸಲ್ಪಟ್ಟ ಕೂಸಿನ ಬರಿ ರುಂಡವೊಂದು ನರಳುತ್ತ ಬಿದ್ದುಕೊಂಡಿತ್ತು. "ಅಯ್ಯೋ!" ಎಂದು ಕಿರುಚಿಕೊಂಡು ಹಿಂದಕ್ಕೆ ಬಿದ್ದುಬಿಟ್ಟೆ. ನನ್ನ ಒಳಗಿನ ಕೂಸೂ ಹೊರಟುಹೋಗಿತ್ತು. (೨-೨-೧೯೨೯)

ಕಕ್ಕಾಬಿಕ್ಕಿಯಾಗಿ ಕಣ್ಣು ತೆರೆದೆ. ಬೆಳದಿಂಗಳು ಹೋಗಿತ್ತು. ಸೂರ್ಯೋದಯವಾಗಿತ್ತು. ನನ್ನ ಹೋಡಿ ಹಾಗೂ ಹೀಗೂ ಹೊಯ್ದಾಡುತ್ತ ಒಂದು ಗುಡ್ಡದ ಓರೆಗೆ ಬಂದು ತಡೆದು ನಿಂತಿತ್ತು.

ಕೆಳಕ್ಕೆ ಹಾರಿಕೊಂಡೆ, ಅತ್ತಿತ್ತ ಸ್ವಲ್ಪ ಓಡಾಡಿದೆ. ಗುಡ್ಡದ ಮೇಲೆ ಹೋಗಬೇಕೆನಿಸಿತು. ಹೊರಟೆ.

ಗುಡ್ಡದ ತುಟ್ಟತುದಿಯ ಒಂದು ಬಂಡೆಗಲ್ಲಮೇಲೆ ಯಾರೋ ಕುಳಿ

ತಂತೆ ಕಂಡಿತು. ಹತ್ತಿರ ಹೋಗಿ ನೋಡಲಾಗಿ ಬಿಳಿಗಡ್ಡದ ಒಬ್ಬ ಮುದು-
ಕನು ಕಣ್ಣುಮುಚ್ಚಿಕೊಂಡು ಕುಳಿತಿದ್ದನು.

ನಾನು ಹತ್ತಿರ ಹೋದೊಡನೆ ಕಣ್ಣು ತೆರೆದು ನನ್ನನ್ನು ನೋಡಿದ. ಕುಳಿತುಕೊಳ್ಳಲು ಸೂಚಿಸಿ "ಏನು ಬೇಕು? ಎಂದು ಕೈಸನ್ನೆಯಿಂದ ಕೇಳಿದ. ನಮಸ್ಕಾರ ಮಾಡಿ ಕುಳಿತುಕೊಂಡನಂತರ "ದಿವ್ಯಾಗ್ನಿಯನ್ನು ಅರಸುತ್ತ ಹೊರಟಿದ್ದೇನೆ. ಈವರೆಗೂ ಎಲ್ಲಿಯೂ ಸಿಕ್ಕಲಿಲ್ಲ. ನೀವದನ್ನು ತೋರಿಸಿ ಕೊಟ್ಟು ಕರುಣಿಸುವಿರಾ?" ಎಂದು ಬೇಡಿಕೊಂಡೆ.

ಮುದುಕ ಮುಗುಳುನಗೆ ನಕ್ಕ. ಏನನ್ನೂ ಮಾತನಾಡಲಿಲ್ಲ.

ಮತ್ತೆ ನಾನು ಅದನ್ನೆ ಕೇಳಿದೆ.

ಮುದುಕ ಗಂಭೀರವಾದ ಧ್ವನಿಯಲ್ಲಿ "ದಿವ್ಯಾಗ್ನಿ ಬೇಕೆ? ಏತಕ್ಕಾಗಿ?" ಎಂದು ತಿರುಗಿ ಕೇಳಿದ.

"ಅಶರೀರವಾಣಿ ಹೇಳಿತು 'ತೆಗೆದುಕೊಂಡು ಬಾ' ಎಂದು. ತರಲು ಹೊರಟಿದ್ದೇನೆ. ಏತಕ್ಕಾಗಿಯೋ ತಿಳಿಯದು." ಎಂದು ಹೇಳಿದೆ.

ಮುದುಕ ಕೆಲಹೊತ್ತು ಸುಮ್ಮನೆ ಕುಳಿತ. ಅಲ್ಲಿಂದ ಹೇಳಿದ: "ಈ ಗುಡ್ಡದ ಆಚೆಯ ಮಗ್ಗಲು ಒಂದು ಚಿಕ್ಕ ರಾಜ್ಯವಿದೆ. ಚಿಕ್ಕದಿದ್ದರೂ ಬಹಳ ಚೊಕ್ಕಾಗಿದೆ. ದಿವ್ಯಾಗ್ನಿಯ ಪ್ರಕಾಶ ಅಲ್ಲಿಯ ಜೀವನದ ಎಲ್ಲ ಪದರುಗಳಲ್ಲಿಯೂ ಕಾಣುತ್ತದೆ. ಮೊದಲು ಅಲ್ಲಿಗೆ ಹೋಗಿ ನೋಡಿಕೊಂಡು ಬಾ. ಆದರೆ ಎಚ್ಚರಿಕೆ! 'ಮಾತು' ಅಲ್ಲಿ ಅಪರಾಧ." ಎಂದಿಷ್ಟೆ ಹೇಳಿ ಮುದುಕ ಮತ್ತೆ ಕಣ್ಣು ಮುಚ್ಚಿಕೊಂಡ.

ನಾನು ಮತ್ತೊಮ್ಮೆ ಮುದುಕನಿಗೆ ನಮಸ್ಕರಿಸಿ ಅಲ್ಲಿಂದ ಹೊರಟೆ.

## ಮೌನರಾಜ್ಯ

ಗುಡ್ಡದ ಆಚೆಯ ಮಗ್ಗಲು ಒಂದು ಸೀಳು-ದಾರಿಯನ್ನು ಹಿಡಿದು ಸಾಗಿದೆ. ಇಳಿಹೊತ್ತಾಗಿತ್ತು. ಕತ್ತಲೆಯಾಗುವದರೊಳಗಾಗಿ ಆ ರಾಜ-

ಧಾನಿಯನ್ನು ಮುಟ್ಟಬೇಕೆಂದು ಅವಸರದಿಂದ ನಡೆಯಹತ್ತಿದೆ. ಇಳಕಲು ಬೇರೆ. ಒಂದೆರಡುಸಲ ಮುಗ್ಗರಿಸಿದೆ. ಆದರೂ ಸಾವರಿಸಿಕೊಂಡು. ಮುಂದೆ ನಡೆದೆ.

ಗುಡ್ಡದ ತಳಕ್ಕೆ ಬರುವಷ್ಟೊತ್ತಿಗೆ ಮಬ್ಬುಗತ್ತಲೆಯಾಯಿತು. ದಣಿವಿನಿಂದ ನೀರಡಿಕೆಯಾಯಿತು. ನೀರಿಗಾಗಿ ಅತ್ತಿತ್ತ ಹುಡುಕಾಡಿದೆ. ಅಲ್ಲಿಯೆ ಒಂದುನೂರು ಹೆಜ್ಜೆಯ ಅಳತೆಯಲ್ಲಿ ಒಂದು ಹೊಕ್ಕುತುಂಬುವ ಭಾವಿ ಕಾಣಿಸಿತು. ಓಡುತ್ತ ಹೋದೆ. ಭಾವಿಯಲ್ಲಿ ಹಣಕಿ ಹಾಕಿದೆ. ಆದಿಶೇಷನ ತಲೆಯ ಹತ್ತಿರ ಮಿಣಕ್ ಮಿಣಕ್ ಎಂದು ನೀರು ಕಂಡಿತು. ದಾಹದ ಒತ್ತಾಯಕ್ಕಾಗಿ ಒಳಗೆ ಇಳಿಯಹತ್ತಿದೆ. ಇಳಿದೇ ಇಳಿದೆ. ಎಷ್ಟೊತ್ತಾದರೂ ನೀರೇ ಕಾಣಿಸಲೊಲ್ಲದು. ದಮ್ಮು ಹತ್ತಿ ಒಂದು ಕ್ಷಣ ಕುಳಿತು ಮತ್ತೆ ಇಳಿಯಹತ್ತಿದೆ. ಎಷ್ಟೋ ಹೊತ್ತು ಇಳಿದ ನಂತರ ಮುಂದೆ ಮೆಟ್ಟಲುಗಳೆ ತೀರಿದವು. ನೀರು ಮಾತ್ರ ಇನ್ನೂ ಕೆಳಗಿತ್ತು. ಇಷ್ಟು ಶ್ರಮಪಟ್ಟು ಬಂದರೂ ಕೊನೆಗೆ ಕುಡಿಯಲಿಕ್ಕೆ ನೀರು ಸಿಗದಂತಾಯಿತಲ್ಲಾ ಎಂದು ಮಿಡುಕಿದೆ. ಏನುಪಾಯ ಮಾಡಬೇಕಂದು ಯೋಚಿಸಿದೆ. ಬಗ್ಗಿ ಮತ್ತೆ ಒಳಗೆ ಹಣಿಕಿ ಹಾಕಿದೆ. ಗೋಡೆಯಲ್ಲಿ ಅಲ್ಲಲ್ಲಿಗೆ ಮೆಟಗಲ್ಲುಗಳನ್ನು ನೆಡುಹಾಕಿದ್ದರು. ಕಷ್ಟಸಾಧ್ಯವಿದ್ದರೂ ಅವುಗಳ ಸಹಾಯದಿಂದ ನೀರ ವರೆಗೂ ಹೋಗಿ ಬರಬಹುದಾಗಿತ್ತು. ಆದದ್ದಾಗಲಿ ಎಂದು ಧೈರ್ಯಮಾಡಿ ಕೆಳಗಿಳಿದು ನೀರಿನ ಒರೆಗೂ ಹೋದೆ. ಇನ್ನೇನು ನೀರು ಸಿಕ್ಕಿತು, ಎಂದು ಹಿಗ್ಗಿ ಬಾಗುವಷ್ಟರಲ್ಲಿ ಭಾವಿಯ ತುಂಬೆಲ್ಲ ಬಣ್ಣಬಣ್ಣದ ಹಾವುಗಳು ಎಲ್ಲಿಂದಲೊ ಬಂದುಬಿಟ್ಟವು. ನೀರೇ ಕಾಣದಂತಾಯಿತು. ಹೌಹಾರಿ ಹಿಂದಕ್ಕೆ ಸರಿದು ನಿಂತೆ. ನೀರಡಿಕೆಯ ದಾಹ ವಿಕೋಪಕ್ಕೆ ಬಂದುಬಿಟ್ಟಿತು. ಒಳಗೆ ಹಾರಿಕೊಂಡಾದರೂ ಬಿಡಲೇ ಎಂದೊಮ್ಮೆ ಯೋಚಿಸಿದೆ. ಧೈರ್ಯ ಸಾಲಲಿಲ್ಲ. ಮೇಲಕ್ಕೂ ಹತ್ತಿ ಬರಲಾರದೆ, ನೀರಿನಲ್ಲಿಯೂ ಇಳಿಯಲಾರದೆ ನಿರುಪಾಯನಾಗಿ ನಿಂತಲ್ಲಿಯೆ ನಿಂತುಬಿಟ್ಟೆ.

ಅಷ್ಟರಲ್ಲಿ ಮಹಾ ಸರ್ಪವೊಂದು ನೀರೊಳಗಿಂದ ಚಿಮ್ಮಿ ಮೇಲಕ್ಕೆ ಸೆಟೆದು ನಿಂತು, ಹೆಡೆ ಬಿಚ್ಚಿ ನಾಲಿಗೆಗಳನ್ನು ಹೊರಚಾಚಿ ನನ್ನನ್ನೆ ನೋಡಹತ್ತಿತು. ಜೀವಭಯ ನನ್ನನ್ನು ನಡುಗಿಸಿತು.

"ಏನು ಬೇಕು ?" ಎಂದು ಸರ್ಪ ಕೇಳಿತು.

ಗಾಬರಿಯಾಗಿ ' ನೀ....ರು ' ಎನ್ನಬೇಕಾದರೆ ಸಾಕುಬೇಕಾಯಿತು.

"ಅಲ್ಲ; ಬೇರೆ ಇದೆ. ಹೇಳು."

"ಬೇರೆ ಏನು? "

"ಇಷ್ಟರಲ್ಲೆ ಮರೆಯಿತೇ ? "

" ತಿಳಿಯದು. "

" ದಿವ್ಯಾಗ್ನಿ ಬಯಸಿ ಹೊರಟಿಲ್ಲವೇ ? "

ನಾಲಗೆ ಕಚ್ಚಿಕೊಂಡು " ಹೌದು, ಹೌದು. " ಎಂದೆ.

" ನೀನು ಆ ರಾಜಧಾನಿಗೆ ಹೊರಟಿರುವಿ. ಅಲ್ಲವೇ ? "

" ಹೌದು. "

" ಸರಿಯಾಯಿತೀಗ. "

" ಏನು ? "

" ಅಲ್ಲಿಗೆ ಹೋಗುವವರು ಇಲ್ಲಿಳಿದು ಹೋಗಲೇಬೇಕು. ಈ ನಿನ್ನ ನೀರಿನ ದಾಹ ನಿಜವಾದ ದಾಹವಲ್ಲ. ಇಲ್ಲಿಗೆ ನಿಮ್ಮನ್ನು ತರುವುದಕ್ಕಾಗಿ ನಾವೆ ಹುಟ್ಟಿಸಿದ್ದು ಅದು. ನೀವಿಲ್ಲಿ ಮಾತು ಬಿಟ್ಟು ಹೋಗಬೇಕಾಗುವುದು. ಅದಕ್ಕಾಗಿ ಕಚ್ಚಿಸಿಕೊಳ್ಳಲೇಬೇಕು. ಜೀವಭಯ ಹೋಗುವುದಕ್ಕಾಗಿ ಈ ನೀರು ಕುಡಿಯಬೇಕು. ಏನು, ಒಪ್ಪಿಗೆಯೇ ? " ಎಂದು ನನ್ನ ಉತ್ತರಕ್ಕಾಗಿ ಕಾಯದೆ ' ಸಳ್ ' ಎಂದು ಮುಂದೆ ಬಂದು ತೀರ ಹತ್ತಿರದಲ್ಲಿ ಹೆಡೆ ತೆಗೆದು ನಿಂತಿತು.

ಮೈ ಜುಮ್ಮೆಂದಿತು. ಧೈರ್ಯ ಸಾಲದೆ ಕಣ್ಣು ಮುಚ್ಚಿಕೊಂಡೆ.

" ಅಷ್ಟೇಕೆ ಅಧೈರ್ಯ ? ಭಯ ಬರುತ್ತಿದ್ದರೆ ಮೊದಲು ನೀರು ಕುಡಿದರಾಯಿತು. " ಎಂದು ಸರ್ಪವೆ ಧೈರ್ಯಕೊಟ್ಟಿತು.

ಕಣ್ಣು ತೆರೆದೆ.

ಸರ್ಪಗಳೆಲ್ಲ ಮಾಯವಾಗಿದ್ದವು. ಬೆಳ್ಳಗೆ ಬೆಳ್ಳಿಯಂತೆ ನೀರು ಹೊಳೆಯುತ್ತಿದ್ದವು. ಬಾಗಿ ಬೊಗಸೆಬೊಗಸೆಯಿಂದ ನೀರು ಕುಡಿದೆ. ಏನು ಆ ನೀರಿನ ಸವಿ ! ತೃಪ್ತಿಯಾಯಿತು.

ಸರ್ಪ ಮತ್ತೆ ಕಾಣಿಸಿಕೊಂಡಿತು. ಹೆಡೆಯೆತ್ತಿತು. ಭುಸ್ ಎಂದಿತು. ಭಯ ಬರಲಿಲ್ಲ.

ಸರ್ಪ ನನ್ನ ಪಾದದ ಮೇಲೆ ಕಚ್ಚಿ ಹೊರಟು ಹೋಯಿತು. ಹೋಗು ವಾಗ "ನೀನು ಹೊರಟಿರುವ ಆ ಚಿಕ್ಕ ರಾಜ್ಯದ ಅರಸನ ಆಳುಗಳೇ ನಾವೆಲ್ಲ. ಇದೆಲ್ಲ ಅವನ ಯೋಜನೆಯೆ." ಎಂದಿಷ್ಟು ಹೇಳಿ ಮಾಯವಾಯಿತು.

ಮೆಟ್ಟಲುಗಳನ್ನು ಹತ್ತಿ ಮೇಲಕ್ಕೆ ಬಂದೆ. ಕತ್ತಲೆ ಹೋಗಿ ಬೆಳಕು ಬಂದಿತ್ತು. ಮನಸ್ಸಿಗೆ ಏನೋ ಒಂದು ತರಹದ ಆನಂದವಾಗಿತ್ತು. ಉಲ್ಲಾಸಭಾವ ಮೈಯಲ್ಲೆಲ್ಲ ತುಂಬಿತ್ತು. ರಾಜಧಾನಿಯ ಕಡೆಗೆ ವೇಗವಾಗಿ ಹೊರಟೆ.

ದೂರದಿಂದ ನೋಡಿದಾಗ ಆಕಾಶದ ವರೆಗೂ ಎತ್ತರವಾಗಿದ್ದ ಕಪ್ಪು ಗೋಡೆಯೊಂದು ಕಾಣಿಸಿತು. ಹತ್ತಿರ ಹೋಗಿ ನೋಡಲು ಅದು ಗೋಡೆ ಯಾಗಿರದೆ ಅದೂ ಒಂದು ಮಹಾಸರ್ಪವೇ ಎಂದು ತಿಳಿಯಿತು. ಇಡೀ ರಾಜಧಾನಿಯನ್ನೆಲ್ಲ ಅದು ಸುತ್ತುಹಾಕಿ ಮಲಗಿತ್ತು. ಈ ಸರ್ಪಕೋಟೆ ಯನ್ನು ನೋಡಿ ಮನಸ್ಸು ದಿಗಿಲುಗೊಂಡಿತು. ಪ್ರವೇಶದ್ವಾರ ಎತ್ತ ಎಂಬುದೇ ತಿಳಿಯದಾಯಿತು. ಹುಡುಕಬೇಕೆಂದು ಸುತ್ತಲೂ ತಿರುಗಿದೆ. ಎಲ್ಲಿಯೂ ಕಾಣಿಸಲಿಲ್ಲ. ಹತ್ತಿ ಒಳಗೆ ಹೋಗುವದಂತೂ ಅಸಾಧ್ಯವೆಂದೆ ಕಂಡಿತು. ದಿಂಗ್ಮೂಢನಾಗಿ ಆ ಸರ್ಪಕೋಟೆಯನ್ನೆ ನೋಡುತ್ತ ನಿಂತೆ.

ಅಷ್ಟೊತ್ತಿಗೆ ಒಳಗಿನಿಂದ ಒಂದು ವಿಚಿತ್ರ ಧ್ವನಿ ಕೇಳಿಸಿತು. ಕೂಡಲೆ ನಾನು ನಿಂತಲ್ಲಿಯೆ ಸರ್ಪ ಬಾಯಿ ತೆರೆಯಿತು. ಆ ಬಾಯೊಳಗಿಂದ ಒಬ್ಬ ಬಂದು "ಒಳಗೆ ಬರಬೇಕು." ಎಂದು ಕೈಸನ್ನೆಯಿಂದ ತಿಳಿಸಿದ.

ಅವನ ಬೆನ್ನುಹತ್ತಿ ಸರ್ಪದ ಬಾಯಲ್ಲಿ ಹೋದೆ. ಬಾಯಿ ಮುಚ್ಚಿತು.

ಸರ್ಪದ ಹೊಟ್ಟೆಯಲ್ಲಿಯೆ ಒಂದು ಸುತ್ತು ತಿರುಗಿಸಿ ನನ್ನನ್ನು ಒಂದು ಬಯಲಿಗೆ ತಂದು ಬಿಟ್ಟು "ಅಲ್ಲಿಗೆ ಹೋಗಬೇಕು ತಾವು." ಎಂದು ಸೂಚಿಸಿ, ಗುರುತು ಕೊಟ್ಟ.

ಇನ್ನೊಬ್ಬ ನಗರರಕ್ಷಕ ಬಂದು ನನ್ನನ್ನು ಮುಂದೆ ಕರೆದುಕೊಂಡು ಹೋಗಿ ಮಹಾದ್ವಾರದೆದುರಿಗೆ ನಿಲ್ಲಿಸಿದ.

ಆ ಮಹಾದ್ವಾರವನ್ನು ನೋಡಿಯೆ ನಾನು ಚಕಿತನಾದೆ. ಅದರ ರಚನೆ ವಿಶ್ವಕರ್ಮನಿಗಾದರೂ ತಿಳಿಯುತ್ತಿತ್ತೊ ಇಲ್ಲವೊ! ದುರ್ಭೇದ್ಯವಾದ ಆ ಮಹಾದ್ವಾರದೊಳಗಿಂದ ನನ್ನನ್ನು ಲೀಲಾಜಾಲವಾಗಿ ಆ ನಗರರಕ್ಷಕ

ಕರೆದುಕೊಂಡು ಹೋದ. ಹೋಗಿ ಒಂದು ವಿಸ್ತಾರವಾದ ಪಟಾಂಗಣದಲ್ಲಿ ನನ್ನನ್ನು ನಿಲ್ಲಿಸಿ ಸಂಜ್ಞಾಸೂಚಕವಾಗಿ ಒಂದು ದಿಕ್ಕಿಗೆ ನೋಡಿದ. ಕೂಡಲೆ ಇನ್ನೊಬ್ಬ ಮನುಷ್ಯ ಬಂದು ನನ್ನನ್ನು ಕರೆದೊಯ್ದು ರಾಜಮಂದಿರದ ಮುಂದೆ ಇನ್ನೊಬ್ಬನ ವಶಕ್ಕೆ ಕೊಟ್ಟು ತಿರುಗಿ ಹೋದ. ಅವನು ನನ್ನನ್ನು ರಾಜಮಂದಿರದಲ್ಲಿ ನೂರೆಂಟು ಕಡೆ ಸುತ್ತಾಡಿಸಿ, ನನ್ನ ನೂರುಪಟ್ಟು ಎತ್ತರ ವಿದ್ದ ಒಂದು ದೊಡ್ಡ ಸಿಂಹಮುಖದ ಎದುರಿಗೆ ನಿಲ್ಲಿಸಿ, ಆ ಮುಖದಲ್ಲಿಯ ಒಂದು ಜಾಗ ಮುಟ್ಟಿ ಹೊರಟು ಹೋದ. ತತ್‍ಕ್ಷಣ ಸಿಂಹಮುಖ ಬಾಯಿ ತೆರೆಯಿತು. ಒಳಗಿನಿಂದ ಒಬ್ಬ ರಾಜದೂತ ಬಂದು ನನ್ನನ್ನು ಕರೆದೊಯ್ದು ರಾಜಾಸನದ ಎದುರಿಗೇ ನಿಲ್ಲಿಸಿದ.

ರಾಜ ನನ್ನನ್ನೊಮ್ಮೆ ಕೆಳಗಿನಿಂದ ಮೇಲಿನವರೆಗೆ ನೋಡಿ, ಇನ್ನೊಂದು ಜಾಗಕ್ಕೆ ಕರೆದೊಯ್ಯಲು ತಿಳಿಸಿದ.

ರಾಜದೂತ ನನ್ನನ್ನು ಒಂದು ಭವ್ಯಮಂದಿರದೆದುರು ಕರೆದೊಯ್ದು ನಿಲ್ಲಿಸಿದ.

ಅದರ ಬಾಗಿಲು ಬೇಗನೆ ತೆರೆಯಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ ತೆರೆಯಿತು. ಮುದುಕನೊಬ್ಬ ಅಲ್ಲಿಯೆ ನಿಂತಿದ್ದ. ನನ್ನನ್ನು ಕರೆದೊಯ್ದು ಒಂದು ಕನ್ನಡಿಯ ಎದುರಿಗೆ ನಿಲ್ಲಿಸಿದ. ಅದರಲ್ಲಿ ನನ್ನ ಪ್ರತಿಬಿಂಬ ಕಾಣಿಸಿತು. ಮುದುಕ ಅದನ್ನು ನೋಡಿ ತಲೆದೂಗಿದ. ಇನ್ನೂ ಒಂದೆರಡು ಕನ್ನಡಿ ಗಳೆದುರಿಗೆ ಅದರಂತೆ ಒಯ್ದು ನಿಲ್ಲಿಸಿ ನೋಡಿ 'ಸರಿ' ಎಂದು ನನ್ನನ್ನು ತಿರುಗಿ ರಾಜನ ಕಡೆಗೆ ಕಳಿಸಿಕೊಟ್ಟ.

ರಾಜ ನನ್ನನ್ನು ನೋಡಿ ಮುಗುಳುನಗೆ ನಕ್ಕು ನಗರಪ್ರವೇಶಕ್ಕೆ ಅಪ್ಪಣೆಯಿತ್ತನಂತರ ರಾಜದೂತ ನನ್ನನ್ನು ಕರೆದೊಯ್ದು ನಗರಕ್ಕೊಯ್ಯುವ ಮಾರ್ಗಕ್ಕೆ ಹಚ್ಚಿ ತಿರುಗಿದ.

ಮೌನದಲ್ಲಿಯೆ ನಡೆದ ಈ ವ್ಯವಹಾರದ ಅರ್ಥವೊಂದೂ ಆಗ ನನ ಗಾಗಲಿಲ್ಲ. ಭಯವಿಸ್ಮಯಗಳು ನನ್ನನ್ನು ಅವರ ಅಧೀನಕ್ಕೆ ಒಪ್ಪಿಸಿಬಿಟ್ಟಿದ್ದವು.

ಒಬ್ಬನೇ ಹೊರಟೆ ರಾಜಮಾರ್ಗದಲ್ಲಿ.

ಎಡಬಲಕ್ಕೆ ಭವ್ಯವಾಗಿ ನಿಂತಿದ್ದ ಏಳಂತಸ್ತಿನ ಮನೆಗಳನ್ನು ಅತ್ತೊಮ್ಮೆ ಇತ್ತೊಮ್ಮೆ ನೋಡುತ್ತ ಮುಂದೆ ಸಾಗಿದ್ದೆ.

ಜನ ಹೋಗುತ್ತಿದ್ದರು; ಬರುತ್ತಿದ್ದರು. ನಿತ್ಯವ್ಯವಹಾರ ಎಲ್ಲಾ ನಡೆದಿತ್ತು. ಆದರೆ ಮಾತಿಲ್ಲ; ಅಂದರೆ ಮಾತಿನ ಉಚ್ಚಾರವಿರದೆ ಮಾತಿತ್ತು. ಅಲ್ಲಿಯ ವಾತಾವರಣದಲ್ಲಿಯೆ ಮಾತನ್ನುಚ್ಚರಿಸದೆ ತಿಳಿದುಕೊಳ್ಳಲು ಅನುಕೂಲವಾಗುವ ಒಂದು ಶಕ್ತಿಯಿತ್ತು. ಶಬ್ದ ಅಲ್ಲಿ ಉಚ್ಚಾರಕ್ಕಾಗಿ ಇರಲಿಲ್ಲ; ತಿಳಿವಳಿಕೆಗಾಗಿ ಇತ್ತು.

ಜನ ಒಬ್ಬರನ್ನೊಬ್ಬರು ಭೆಟ್ಟಿಯಾಗುತ್ತಿದ್ದರು. ಸಂಭಾಷಣೆ ನಡೆಸುತ್ತಿದ್ದರು; ಆದರೆ ಉಚ್ಚಾರವಿರಲಿಲ್ಲ. ಅದೆಲ್ಲ ಮನಸ್ಸಿನಲ್ಲಿ ಮಾತು ನಡೆದಂತೆ.

ಪೇಟೆಯಲ್ಲಿ ತಿರುಗಾಡಿ ನೋಡಿದೆ. ಮಾತಿಲ್ಲ. ಆದರೆ ವ್ಯವಹಾರ ನಡೆದಿದೆ.

ಬೀದಿಬೀದಿ ಹಿಡಿದು ಎಲ್ಲ ಕಡೆಗೂ ಸುತ್ತಾಡಿದೆ. ಎಲ್ಲೆಲ್ಲಿಯೂ ಹೀಗೆಯೇ; ಶಬ್ದೋಚ್ಚಾರ ಕೇಳಿಸಲಿಲ್ಲ.

ಒಬ್ಬರಿಗೊಬ್ಬರು ಏನನ್ನಾದರೂ ತಿಳಿಸಬೇಕಾಗಿದ್ದರೆ ಒಂದು ವಿಶಿಷ್ಟ ಅಂತರದಲ್ಲಿ ಬಂದು ಇಬ್ಬರು ನಿಂತುಬಿಡುತ್ತಿದ್ದರು. ಕೆಲ ಹೊತ್ತಾದ ಮೇಲೆ ಹೊರಟುಹೋಗುತ್ತಿದ್ದರು. ಹೇಳುವುದು ಕೇಳುವುದು ಎಲ್ಲಾ ಮನಸ್ಸಿನಲ್ಲಿಯೆ ನಡೆದಿರುತ್ತಿದ್ದಿತು.

ಯಾರು ಯಾರಿಂದಲೂ ತಮ್ಮ ಮನಸ್ಸನ್ನು ಮುಚ್ಚಿಡಲು ವಿಶಿಷ್ಟ ಅಂತರದಲ್ಲಿ ಹೋದಮೇಲೆ ಸಾಧ್ಯವಿರಲಿಲ್ಲ. ಉಚ್ಚಾರ ಒಂದು, ವಿಚಾರ ಇನ್ನೊಂದು, ಮಾಡುವದು ಮತ್ತೊಂದು, ಹೀಗಾಗುವುದಕ್ಕೆ ಅಲ್ಲಿ ಆಸ್ಪದವೇ ಇರಲಿಲ್ಲ. ಒಂದು ವೇಳೆ ಹಾಗೆ ಸಂಭವಿಸಿದ್ದರೆ ಶಿಕ್ಷೆ ತಪ್ಪುತ್ತಿರಲಿಲ್ಲ.

ತಿರುಗಿ ತಿರುಗಿ ಹಸಿವೆಯಾಯಿತು, ನೀರಡಿಕೆಯಾಯಿತು. "ಹೇಗೆ ಮಾಡುವದು ? ಯಾರನ್ನು ಕೇಳುವುದು ?," ಎಂದು ಯೋಚಿಸುತ್ತ ಸ್ವಲ್ಪ ನಿಂತೆ. ಅಷ್ಟರಲ್ಲಿ ಒಬ್ಬ ಗೃಹಸ್ಥ ಬಂದು ನನ್ನೆದುರಿಗೆ ವಿಶಿಷ್ಟ ಅಂತರದಲ್ಲಿ ನಿಂತ. ಕೂಡಲೆ ಮೌನದಲ್ಲಿಯೆ ನಮ್ಮ ನಡುವೆ ಸಂಭಾಷಣೆ ಸುರುವಾಯಿತು.

"ನಿಮಗೆ ಹಸಿವೆಯಾಗಿದೆ. ನಮ್ಮ ಆತಿಥ್ಯ ಸ್ವೀಕರಿಸಬೇಕು."

"ಆಗಬಹುದು."

ಆ ಗೃಹಸ್ಥ ತನ್ನ ಮನೆಗೆ ಕರೆದುಕೊಂಡು ಹೋದ. ಆತಿಥ್ಯ ಸಲ್ಲಿಸಿದ.

ಊಟವಾದ ಮೇಲೆ ಇಬ್ಬರೂ ತಾಂಬೂಲ ಸೇವಿಸುತ್ತ ವಿಶಿಷ್ಟ ಅಂತರದಲ್ಲಿ ಕುಳಿತಾಗ ಮತ್ತೆ ಮಾತುಕತೆ ನಡೆಯಿತು.

"ರಾಜ್ಯದಾಡಳಿತ ಈ ವ್ಯವಸ್ಥೆಯಿಂದ ಸುಸೂತ್ರವಾಗಿ ಸಾಗುತ್ತದೆಯೇ?"

"ಸಾಗುತ್ತದೆ."

"ಆಡಳಿತದ ಎಲ್ಲ ಅಂಗಗಳನ್ನೂ ಈ ವ್ಯವಸ್ಥೆಯು ನಿರ್ವಹಿಸುತ್ತದೆಯೇ?"

"ನಿರ್ವಹಿಸುತ್ತದೆ. ಮಾತಿಲ್ಲ ಎಂದರೆ ನೀವು ಬೇರೆ ತಿಳಿದುಕೊಂಡಿದ್ದೀರಿ. ಶಬ್ದವನ್ನು ಉಚ್ಚಾರದಿಂದ ಬಳಸುವದೂ ಉಂಟು, ಉಚ್ಚಾರವಿಲ್ಲದೆ ವಿಶಿಷ್ಟ ಅಂತರದಲ್ಲಿ ಬಂದು ನೇರವಾಗಿ ಒಂದು ಪ್ರವಾಹಿದ್ರವ್ಯದ ಮೂಲಕ ಕಳಿಸುವದೂ ಉಂಟು. ನಮ್ಮ ಮಹಾರಾಜರು ಆ ಇನ್ನೊಂದನ್ನು ರೂಢಿಗೆ ತಂದಿದ್ದಾರೆ ಅಷ್ಟೆ."

"ನ್ಯಾಯ ವಗೈರೆ ಬಂದರೆ?"

"ಅವಕ್ಕೆಲ್ಲಾ ವ್ಯವಸ್ಥೆಯಿದೆ. 'ನ್ಯಾಯಮಂದಿರ' ಕಟ್ಟಿಸಿದ್ದಾರೆ. ಒಳಗೆ ಹೋದರೆ ಸಾಕು, ನ್ಯಾಯ ಬಗೆಹರಿಯುತ್ತದೆ. ಧರ್ಮಸಂಕಟ ಬಂದರೆ 'ಧರ್ಮಸೂಕ್ಷ್ಮಮಂದಿರ' ಇದೆ. ಅಲ್ಲಿಯೂ ಹಾಗೆಯೆ. ಅಂತಹ ಧರ್ಮಸಂಕಟಗಳೇನಾದರೂ ಬಂದರೆ ಒಳಗೆ ಹೋಗಿಬಿಟ್ಟರೆ ಸಾಕು, ಎಲ್ಲಾ ನಿವಾರಣೆಯಾಗಿಬಿಡುತ್ತದೆ. ಇದರಂತೆಯೆ 'ರಾಯಭಾರಿಮಂದಿರ' ವಿದೆ; 'ರಾಜಮಂದಿರ'ವಿದೆ; 'ಸ್ತ್ರೀಮಂದಿರ'ವಿದೆ; 'ಬಾಲಮಂದಿರ'ವಿದೆ. ಇವೆಲ್ಲಾ ಸೇರಿ ರಾಜ್ಯದಾಡಳಿತದಲ್ಲಿ ಏನು ಬಂದರೂ ನಿರ್ವಹಿಸಿಕೊಂಡು ಹೋಗುತ್ತವೆ. ಇಲ್ಲಿ ಎಲ್ಲರೂ '**ಮನುಷ್ಯರೇ**' ಇರುವದರಿಂದ ಆಡಳಿತ ಇನ್ನೂ ಸುಸೂತ್ರವಾಗಿದೆ; 'ಮಂದಿರ'ಗಳೆಲ್ಲ ಒಳ್ಳೆ ಫಲಕಾರಿಯಾಗಿವೆ."

"ಮನುಷ್ಯರೇ ಅಂದರೆ?"

"ನೀವು ಬಂದೊಡನೆ ನಿಮ್ಮನ್ನೊಯ್ದು ಒಂದು ಕನ್ನಡಿಯ ಮನೆಯಲ್ಲಿ ಪರೀಕ್ಷಿಸಲಿಲ್ಲವೇ?"

"ಹೌದು. ಅದರಿಂದೇನು ಗೊತ್ತಾಗುತ್ತದೆ?"

"ಅದೇ ಈ ವ್ಯವಸ್ಥೆಗೆ ಮೂಲಾಧರ. 'ಪರೀಕ್ಷಾಮಂದಿರ' ಅದು.

ಅಲ್ಲಿಯ ಕನ್ನಡಿಗಳು ಸಾಮಾನ್ಯವಲ್ಲ. ಅವಕ್ಕೆ ಯಾರೆ ಬಂದರೂ ಅವರ ಸ್ವ-ಸ್ವರೂಪದರ್ಶನ ಮಾಡಿಸುವ ಶಕ್ತಿ ಇದೆ. ಹೊರಗೆ ಮನುಷ್ಯ, ಮನುಷ್ಯ ನಂತೆ ಕಂಡರೂ ಮನುಷ್ಯನಿರುವದಿಲ್ಲ. ಅದನ್ನೇ ಅವು ತೋರಿಸಿಕೊಡು ತ್ತವೆ. ಎದುರಿಗೆ ನಿಂತರೆ ಸಾಕು, ನಿಮ್ಮ ಸ್ವರೂಪವನ್ನು ಬಯಲಿಗೆಳೆದು ಬಿಡುತ್ತವೆ. ಅಲ್ಲಿ ನೀವು 'ನಿಮ್ಮಂತೇ' ಕಂಡಿರಬೇಕು, ಅಲ್ಲವೇ?"

"ಅಂದರೆ? ನಾನು ನನ್ನಂತೇ ಕಾಣುವುದು ಬಿಟ್ಟು ಬೇರೆಯವರಂತೆ ಕಾಣುವದು ಶಕ್ಯವೇ?"

"ಅದೇ ಶಕ್ಯ. ಅದನ್ನೇ ತೋರಿಸುತ್ತವೆ. ಯಾರೇ ಹೋಗಿ ಅವು ಗಳೆದುರು ನಿಂತಿದ್ದರೂ ಅವು ಒಮ್ಮೊಮ್ಮೆ—ಅದೇಕೆ, ಬಹಳ ಸಲ—ಸಿಂಹ, ಹುಲಿ, ಚಿರ್ಚ, ನರಿ, ನಾಯಿ, ಕತ್ತೆ, ಹಂದಿ ಮೊದಲಾದ ಪಶುಗಳ ಮುಖ ಗಳನ್ನೂ ತೋರಿಸುತ್ತವೆ. ಅಂತರಂಗದಲ್ಲಿ ಅಥವಾ ಮೂಲದಲ್ಲಿ ತನಗೆ ತಿಳಿಯದೆಯೆ ಮನುಷ್ಯ ಏನಿದ್ದಾನೆಂಬುದರ ಸ್ವರೂಪದರ್ಶನ ಮಾಡಿಸುವ ಮಾಯಾದರ್ಪಣ ಅವು. ಮನುಷ್ಯನ ಸ್ವ-ಸ್ವರೂಪದರ್ಶನವಾಯಿತೆಂದರೆ ಒಳಗೆ ಬಿಡಲ ಅನುಕೂಲವಾಗುತ್ತದೆ."

"ಹೀಗಿದೆಯೆ? ನನಗೆ ಗೊತ್ತೇ ಆಗಲಿಲ್ಲ! ರಾಜಧಾನಿಯ ಮಟ್ಟಿಗೆ ಇದೆಲ್ಲ ಸರಿಯಾದೀತು ಎನ್ನಬಹುದು. ಉಳಿದೆಲ್ಲ ಕಡೆಗೆ ಹೇಗೆ?"

"'ವಿಶ್ವಮಂದಿರ'ವೊಂದನ್ನು ಬಿಟ್ಟು ಪ್ರತಿಯೊಂದು ಊರಿಗೂ ನ್ಯಾಯಮಂದಿರಗಳಿವೆ, ಶಿಕ್ಷಣಮಂದಿರಗಳಿವೆ, ಸ್ತ್ರೀಮಂದಿರಗಳಿವೆ, ಎಲ್ಲಾ ಮಂದಿರಗಳೂ ಇವೆ. ವಿಶ್ವಮಂದಿರ ಮಾತ್ರ ರಾಜಧಾನಿಯಲ್ಲಿಯೆ ಇದೆ. ಇಲ್ಲಿದ್ದುಕೊಂಡು ಹೊರಗಿನ ದೂರದೂರ ದೇಶಗಳ ಬಗ್ಗೆ ತಿಳಿದುಕೊಳ್ಳ ಬೇಕಾದರೆ ಆ ವಿಶ್ವಮಂದಿರದಿಂದ ತಿಳಿದುಕೊಳ್ಳಬಹುದು. ಮಹಾನು ಭಾವರಿಗಷ್ಟೆ ಅಲ್ಲಿ ಪ್ರವೇಶವಿದೆ."

ಇದನ್ನೆಲ್ಲಾ ನೋಡಿ, ಕೇಳಿ ಆ ಕ್ಷಣಕ್ಕೆ ಚಮತ್ಕಾರವೆನಿಸಿತಾದರೂ ಕೊನೆಯ ವರೆಗೂ ಅದೇ ಪರಿಸ್ಥಿತಿಯಲ್ಲಿರಬೇಕು, ಬಾಳಬೇಕು ಎಂಬ ಆಕರ್ಷಣ ಹುಟ್ಟಿ ಬೆಳೆಯಲಿಲ್ಲ. ಅಂತೇ ಕೊನೆಯದಾಗ "ಇದೆಲ್ಲಾ ಆಯಿತು. ಏನಿದರಿಂದ ಬಂದ ಹಾಗಾಯಿತು?" ಎಂದು ಕೇಳಿದೆ.

"ಇದೆ. ಮಾತನ್ನು ಉಚ್ಚರಿಸುವುದು, ಬರೆಯುವುದು, ಇದಕ್ಕೆ

ಹಿಡಿಯುವ ಅವಕಾಶಕ್ಕಿಂತ ಎಷ್ಟೋ ಪಟ್ಟು ಕಡಿಮೆ ಅವಕಾಶ ಈ ಮೌನ ಸಂಭಾಷಣೆಗೆ ಹಿಡಿಯುತ್ತದೆ. ಅದರಿಂದಲೇ ಇಲ್ಲಿಯ ಮನುಷ್ಯನ ಆಯು ರ್ಮರ್ಯಾದೆ ನಿಮಗಿಂತ ಎಷ್ಟೋಪಟ್ಟು ಹೆಚ್ಚಿದೆ ಎನಿಸುತ್ತದೆ. ಅದಿಲ್ಲದ್ದ ರಿಂದಲೇ ನಿಮ್ಮಲ್ಲಿಯ ಆಯುರ್ಮರ್ಯಾದೆ ಕಡಿಮೆಯಾಗಿದೆ. ಯುದ್ಧ ನಮ್ಮಲ್ಲಿಲ್ಲವೇ ಇಲ್ಲ; ನಿಮ್ಮಲ್ಲಿ ಇಲ್ಲದೆ ಇಲ್ಲ.''

"ನಾನಿನ್ನು ಹೊರಡಬಹುದೇ?''

"ನನ್ನಿಂದ ತೊಂದರೆಯಾಗಲಿಲ್ಲವಷ್ಟೆ?''

"ಛೆ, ಛೆ! ಇಲ್ಲ'' ಎಂದು ಆ ಗೃಹಸ್ಥನ ಅಪ್ಪಣೆ ಪಡೆದು ಅಲ್ಲಿಂದ ಹೊರಟೆ. (೧೫-೫-೧೯೨೯)

## ದಿವ್ಯಾಗ್ನಿ

ಮುದುಕ ಹೇಳಿದ ದಿವ್ಯಾಗ್ನಿ ಎಲ್ಲಿದ್ದೀತು? ಎಂದು ಯೋಚಿಸುತ್ತ ಬೀದಿಗುಂಟ ನಡೆದೆ. ತಿರುಗಿ ತಿರುಗಿ ಬೇಸತ್ತೆ. ಹುಡುಕದೆ ಇದ್ದ ಯಾವ ಜಾಗವೂ ಉಳಿಯಲಿಲ್ಲ. ಮಾತಾಡಬೇಕೆಂದು ಮನಸ್ಸು ತುಡುಕಹತ್ತಿತು. ಆದರೂ ತಡೆಹಿಡಿದು ಒಂದು ವಿಹಾರ-ಸರೋವರದ ದಂಡೆಯ ಮೇಲೆ ಹೋಗಿ ಕುಳಿತೆ.

ನಿರಾಸೆ ಮನಸ್ಸನ್ನು ಶೂನ್ಯವಾಗಿಸಿತ್ತು. ಅಲ್ಲಿ ಬೀಸುತ್ತಿದ್ದ ತಂಗಾಳಿಗೆ ಮೈಯೊಡ್ಡಿ ತೋಳು ತಲೆಗಿಂಬು ಮಾಡಿಕೊಂಡು ಅಡ್ಡಾದೆ. ಕಣ್ಣು ತಾವಾಗಿಯೆ ಮುಚ್ಚಿಕೊಂಡವು. ಕೂಡಲೆ ಗುಡ್ಡದ ಮೇಲೆ ಕಂಡಿದ್ದ ಮುದುಕ ಎದುರಿಗೆ ಬಂದು ನಿಂತು "ಕಂಡಿತೇ ದಿವ್ಯಾಗ್ನಿ?" ಎಂದು ಕೇಳದಂತಾಯಿತು. ಅಡ್ಡಾಸಿ ಎಚ್ಚತ್ತು ಕಣ್ಣು ತೆರೆದೆ. ಎದುರಿಗೇ ಮುದುಕ ನಿಂತಿದ್ದ. ಮುಖದ ಮೇಲೆ ಪ್ರಸನ್ನತೆಯ ಬೆಳ್ದಿಂಗಳು ಹಬ್ಬಿತ್ತು, ನಗೆಯ ಮಲ್ಲಿಗೆ ಅರಳಿತ್ತು.

ಎದ್ದೆ. ನಮಸ್ಕರಿಸಿದೆ. ಬಾಗಿ ನಿಂತೆ.

ಮುದುಕ “ ಕಂಡಿತಲ್ಲವೇ ದಿವ್ಯಾಗ್ನಿ ? ” ಎಂದು ಮತ್ತೆ ಕೇಳಿದ.

“ ಇಲ್ಲ. ” ಎಂದೆ.

“ ಕಾಣಿಸಲಿಲ್ಲ ? ” ಎಂದು ಮುದುಕ ನಕ್ಕ.

ಉತ್ತರ ಕೊಡದೆ ಹಾಗೇ ನಿಂತೆ.

ಮುದುಕ ನನ್ನ ಕಣ್ಣ ಮೇಲೆ ಕೈಯಾಡಿಸಿ ಏನನ್ನೊ ಹಚ್ಚಿ “ ನೋಡು ಈಗ.” ಎಂದ.

ಕಣ್ಣು ತೆರೆದೆ. ಅರಮನೆ ಬಿಟ್ಟು ಹೊರಟಾಗಿನಿಂದ ಈಗಿನ ವರೆಗೂ ನಡೆದದ್ದೆಲ್ಲಾ ಒಂದೂ ವಿವರ ಬಿಡದೆ ಚಿತ್ರಚಿತ್ರವಾಗಿ ಕಣ್ಣೆದುರಿಗೆ ಹಾಯ್ದು ಹೋಯಿತು. ಮುಪ್ಪಿನ ತಾಯಿಯಲ್ಲಿ, ದೈನ್ಯಮೂರ್ತಿಯಾಗಿದ್ದ ನನ್ನ ಅರಸಿಯಲ್ಲಿ, ನನ್ನ ಮಗುವಿನ ಮುಗ್ಧಸ್ಮಿತ ಮುಖದಲ್ಲಿ, ಸುವರ್ಣ ಪಂಜರದಲ್ಲಿದ್ದ ಪಂಡಿತಪಕ್ಕಿಯಲ್ಲಿ, ಮಾನವ-ತೋಟವನ್ನು ಹಾಳುಗೆಡಹಿದ ಆ ನರಭಕ್ಷಕನಲ್ಲಿ, ಸದಿಯ ದಂಡೆಯ ಮೇಲಿದ್ದ ಸಿಡಿಲ್‌ನುಂಗಿದ ಮಾಮರದಲ್ಲಿ, ಗುಡಿಯಲ್ಲಿ ಕಂಡ ಆ ತರುಣಿಯಲ್ಲಿ, ಸುತ್ತಿಗೆ ಹಿಡಿದ ಆ ಸಂಹಾರಪುರುಷನಲ್ಲಿ, ಗಾಳಿಯ ಹಡಗದಲ್ಲಿದ್ದ ಅಸಂಖ್ಯ ಪ್ರಯಾಣಿಕರಲ್ಲಿ, ಪರೀಕ್ಷೆಯ ಭಾವಿಯಲ್ಲಿ, ಸರ್ಪಗಳಲ್ಲಿ, ಗಿಡ-ಮರಗಳಲ್ಲಿ, ಪಶು-ಪಕ್ಷಿಗಳಲ್ಲಿ, ಹುಲಿ-ಸಿಂಹಗಳಲ್ಲಿ, ಗುಡ್ಡ-ಪರ್ವತಗಳಲ್ಲಿ, ನದಿ-ಸರೋವರಗಳಲ್ಲಿ, ಉರಿಯುವ ಕಮಲದಂತಿದ್ದ ಅಗ್ನಿಯು ಪ್ರಜ್ವಲಿಸುತ್ತಿದ್ದುದನ್ನು ಕಂಡೆ. ಮನಸ್ಸು ಅರಳಿತು. ಪ್ರಸನ್ನತೆ ಒಳಗೆಲ್ಲ ತುಂಬಿತು.

“ ದಿವ್ಯಾಗ್ನಿಯನ್ನೀಗ ಕಂಡೆಯಾ ? ” ಎಂದು ಮುದುಕ ಕೇಳಿದ.

“ ಕಂಡೆ. ” ಎಂದೆ.

“ ಹಾಗಾದರೆ ಹೊರಡಿನ್ನು. ”

“ ಆದರೆ.... ” ಎಂದು ಅನುಮಾನಿಸುತ್ತ ನಿಂತೆ.

“ ಏನು ? ” ಎಂದು ಮುದುಕ ಕೇಳಿದ.

“ ಅಗ್ನಿಯನ್ನೇನೊ ಕಂಡೆ. ಕಂಡದ್ದು ಕಂಡಲ್ಲಿಯೆ ಉಳಿದು, ಒಯ್ಯಲಿಕ್ಕೆ ನನ್ನ ಹತ್ತಿರ ಏನೂ ಉಳಿಯಲಿಲ್ಲವಲ್ಲ ? ” ಎಂದು ತಡವರಿಸಿದೆ.

ಮುದುಕ “ ನಿನ್ನೆದೆಯನ್ನು ನೋಡಿಕೊ. ” ಎಂದು ನಕ್ಕು ಹೇಳಿದ. ನೋಡಿಕೊಂಡೆ. ನನ್ನೆದೆಯಲ್ಲಿಯೂ ಅಂತಹ ಕಮಲಾಗ್ನಿಯು ಪ್ರಕಾಶಿಸು

ತ್ತಿರುವದು ಕಂಡಿತು. ಹಿಗ್ಗಿದೆ. ಕಣ್ಣಿಗೆ ಹೊಸ ದೃಷ್ಟಿ ಬಂತು; ಹೊಸ ಕಳೆ ಬಂತು. ಕೃತಜ್ಞತೆಯಿಂದ ಮುದುಕನನ್ನು ಮನಸ್ಸಿನಲ್ಲಿಯೆ ವಂದಿಸಿದೆ. (೭–೨–೧೯೨೯)

"ಆಯಿತೇ? ಬಾ ಇನ್ನು." ಎಂದವನೆ ಮುದುಕ ಮುಂದೆ ಹೊರಟ. ನಾನು ಬೆನ್ನು ಹತ್ತಿದೆ.

ಎಲ್ಲೆಲ್ಲಿಂದಲೋ ಹಾಯಿಸಿ ನನ್ನನ್ನು ಕರೆದುಕೊಂಡು ಹೊರಟಿದ್ದ ಮುದುಕ. ಅವನ ವೇಗ ನನ್ನನ್ನು ದಣಿಯಿಸಿತು. ಆದರೂ ಮಾತನಾಡದೆ ಆತನ ಬೆನ್ನುಹತ್ತಿದ್ದೆ. ಒಂದು ಜಾಗಕ್ಕೆ ಬಂದೊಡನೆ ಮುದುಕ ನಿಂತ. ನನ್ನನ್ನು ತನ್ನ ಹತ್ತಿರಕ್ಕೆ ಕರೆದು ನನ್ನ ಕಣ್ಣಿಗೆ ಮತ್ತೆ ಒಂದು ತರಹದ ದ್ರವ್ಯ ಹಚ್ಚಿದ. ದೃಶ್ಯವೆಲ್ಲ ಬದಲಾಯಿತು.

## ಜೀವನಸೂತ್ರ

ಗಾಢವಾದ ಕತ್ತಲೆ.

ಗೆಜ್ಜೆಯ ಮೃದುಸ್ವರ ಎಲ್ಲಿಂದಲೊ ಕೇಳಿಬಂತು.

ಅಲ್ಲಿಂದ ಒಂದು ಪ್ರಕಾಶಬಿಂದು ಬಂತು. ಅದರಲ್ಲಿ ಒಂದು ಹೊಳೆಯುವ ದೇಹಾಕಾರ ಮೂಡಿತು. ಅದು ಸರಿದಂತೆಲ್ಲ ಅದರ ಸುತ್ತಲಿದ್ದ ಬೆಳಕೂ ಸರಿದಾಡಹತ್ತಿತು.

ಇದೆಲ್ಲ ಮಾಯವಾಗಿ ಒಮ್ಮೆಲೆ ಮತ್ತೆ ಕತ್ತಲೆಗವಿಯಿತು.

ಬಿರುಗಾಳಿ ಬೀಸಿತು.

ಸಮುದ್ರದ ತೆರೆಗಳು ಭೋರ್ಗರೆಯುತ್ತ ದಂಡೆಗೆ ಅಪ್ಪಳಿಸುವ ದಾರುಣ ಸಪ್ಪಳ ಕೇಳಿಸಿತು.

ಈ ಕತ್ತಲೆ ಅದರ ರೌದ್ರವನ್ನು ಇನ್ನೂ ಹೆಚ್ಚಿಸಿತ್ತು.

ಎಲ್ಲ ಕಡೆಗೂ ಮತ್ತೆ ಬೆಳಕು ಬಂತು.

ಸಮುದ್ರ ಬೆಳ್ಳಿಯಂತೆ ಹೊಳೆಯಹತ್ತಿತು.

ಸಮುದ್ರದ ಆಚೆಯಿಂದ ಬೆಳಕೊಂದು ನೀರ ಮೇಲೆ ಇತ್ತಕಡೆಗೇ ಓಡಿ ಬರಹತ್ತಿತು.

ಚಂದ್ರನಿರದ ಬೆಳದಿಂಗಳ ಬೆಳಕು ಎಲ್ಲ ಕಡೆಗೂ ಹಬ್ಬಿತ್ತು.

ಓಡಿಬರುತ್ತಿದ್ದ ಆ ಬೆಳಕು ನೀರಲ್ಲಿಯೆ ಮುಳುಗಿತು.

ಬೆಳದಿಂಗಳಿನ್ನೂ ಇತ್ತು.

ಕೆಲನಿಮಿಷಗಳು ಜಾರಿದ ನಂತರ ಸಮುದ್ರದೊಳಗಿಂದ ಒಂದು ಪ್ರಕಾಶಮಾನವಾದ ತೇಜೋಗೋಲವು ತನ್ನ ಸುತ್ತ ತಿರುಗುತ್ತ ಸಾವಕಾಶ ವಾಗಿ ಏಳಹತ್ತಿತು.

ಸುವರ್ಣಪ್ರಕಾಶವು ಹಬ್ಬಿತು.

ರುದ್ರಸಮುದ್ರ ಮನೋಹರವಾಯಿತು.

ತೇಜೋಗೋಲವು ತಿರುಗುತ್ತ ತಿರುಗುತ್ತ ಆಕಾಶದಲ್ಲಿ ಮೇಲೆ ಬಂದು ನಿಂತಿತು. ಅದರಲ್ಲಿ ರೇಶಿಮೆಯ ಎಳೆಗಳಂತೆ ಎಷ್ಟೋ ರೇಖೆಗಳು ಕಾಣ ಹತ್ತಿದವು. ಅವು ಶುಭ್ರವಾಗಿ ಹೊಳೆಯುತ್ತಿದ್ದವು. ಆ ರೇಖೆಗಳೆಲ್ಲಾ ಒಂದೇ ಬಿಂದುವಿನಿಂದ ಹೊರಟು, ಸುಳಿಸುಳಿಯಾಗಿ ಸುತ್ತಾಡಿ, ತಿರುಗಿ ಬಂದು ಆ ಬಿಂದುವಿನಲ್ಲೆ ಕೂಡಿದ್ದವು. ಆ ರೇಖೆಗಳಲ್ಲಿ ಪಾದರಸದಂತಹ ಒಂದು ರಸ ಹರಿದಾಡುತ್ತಿತ್ತು. ಗೋಲದ ಮಧ್ಯದಲ್ಲಿ ಮಾತ್ರ ಸ್ವಲ್ಪ ಕೆಂಪು ಕಾಣುತ್ತಿತ್ತು.

ಆ ರೇಖೆಗಳೀಗ ಮಾಯವಾದವು.

ತೇಜೋಗೋಲವು ಈಗ ಹಸಿರು ಪ್ರಕಾಶವನ್ನು ಕೊಡಹತ್ತಿತು. ಕ್ಷಣದಲ್ಲಿ ಹಸಿರು ಹೋಗಿ ಹೊಂಬಣ್ಣವಾಯಿತು.

ತೇಜೋಗೋಲದಲ್ಲೀಗ ನೀರು ಕಾಣಿಸಿದವು. ನೀರಿನಲ್ಲಿ ಅಸಂಖ್ಯ ಕಮಲಗಳರಳಿ ನಿಂತಿದ್ದವು. ಅರಳಿದ ಕಮಲಗಳ ಕಾಂತಿಯೆ ಆ ತೇಜೋ ಗೋಲದ ಬಣ್ಣವನ್ನು ಬದಲಿಸಿತ್ತು.

ಅಲ್ಲಿ ಅರಳಿದ ಕಮಲಗಳ ಸುಗಂಧವನ್ನು ತಂಗಾಳಿ ತುಂಬಿಕೊಂಡು

ತರಹತ್ತಿತು.

ತೇಜೋಗೋಲ ಮಾಯವಾಯಿತು. ಚಂದ್ರನು ಉದಯಿಸಿದನು. ಉದಯಿಸಿದನೆನ್ನುವಷ್ಟರಲ್ಲಿಯೆ ಮರೆಯಾಗಿದ್ದನು. ಮತ್ತೆ ಕತ್ತಲು ತುಂಬಿತು.

ಸಮುದ್ರದಿಂದ ನಕ್ಷತ್ರಗಳ ಗುಂಪೊಂದು ಎದ್ದಿತು. ಶುಭ್ರಪ್ರಕಾಶ ಹರಡಿತು. ನಕ್ಷತ್ರಗಳು ಆಕಾಶದ ತುಂಬೆಲ್ಲ ಎತ್ತ ಬೇಕಾದತ್ತ ಹರಿದಾಡ ಹತ್ತಿದವು. ಶಾಂತಮಯವಾದ ಸೂತ್ರವೊಂದು ಎಲ್ಲಿಂದಲೊ ಬಂದು ಆ ನಕ್ಷತ್ರಗಳಲ್ಲೆಲ್ಲಾ ಹೊಕ್ಕು ಅವನ್ನು ವರ್ತುಲಾಕರದಲ್ಲಿ ಬಿಗಿದು – ಸ್ಫಟಿಕ ಮಣಿಮಾಲೆಯಂತೆ – ನಿಲ್ಲಿಸಿತು.

ಮುಂದೇನಾಗುತ್ತದೆ ಎಂದು ಆತುರದಿಂದ ನೋಡುತ್ತಿರುವಾಗಲೆ ಎಲ್ಲ ಮಾಯವಾಯಿತು. ಹತ್ತಿರವೇ ನಿಂತಿದ್ದ ಮುದುಕ "ಅರ್ಥವಾಯಿತೇ ?" ಎಂದು ಕೇಳಿದ.

"ಇಲ್ಲ." ಎಂದೆ.

ಮುದುಕ ಮುಗುಳುನಗೆ ನಕ್ಕು ಹೇಳಿದ :

"ನಾವೀಗ ನಿಂತಿದ್ದು ಪಾತಾಳ. ಮೊದಲು ಬಂದ ತೇಜೋಗೋಲವೇ ಪೃಥ್ವಿ. ಅದರಲ್ಲಿ ಕಂಡ ಶುಭ್ರರೇಖೆಗಳು ಜೀವರೇಖೆಗಳು. ಅವುಗಳಲ್ಲಿ ಹರಿದಾಡುತ್ತಿದ್ದುದೆ ಜೀವರಸ. ಆ ಪ್ರಕಾಶ ಆತ್ಮ. ಎಲ್ಲ ಆತ್ಮಗಳನ್ನು ಬಿಗಿದು ಕಟ್ಟಿದ ಆ ರೇಖೆಯೆ ಜೀವನಸೂತ್ರ. ಅಲ್ಲಿಯ ಕಮಲಗಳು ಉಚ್ಚ ಜೀವರಾಶಿಗಳು, ನಕ್ಷತ್ರಗಳು ಕಮಲಗಳ ಇನ್ನೊಂದು ರೂಪ. ಜೀವರೇಖೆಯೇ ಎಲ್ಲರನ್ನು ಬಿಗಿದುಕಟ್ಟಿರುವದು. ನಕ್ಷತ್ರಗಳು ಅಸಂಖ್ಯ ರೇಖೆಗಳೂ ಅಸಂಖ್ಯ."

(೨೯–೭–೧೯೨೯)

ಮುದುಕ ಒಮ್ಮೆಲೆ ಮಾತು ನಿಲ್ಲಿಸಿದ. ತಲ್ಲೀನನಾಗಿ ಕೇಳುತ್ತಿದ್ದ ನನಗೆ, ಓಡುತ್ತಿದ್ದ ಕುದುರೆ ಒಮ್ಮೆಲೆ ನಿಂತಂತೆನಿಸಿತು. ಮುದುಕನ ಕಡೆಗ ತಿರುಗಿ ನೋಡಿದೆ.

ಮುದುಕ "ಏನು ಬೇಕು ?" ಎಂದು ಕೇಳಿದ.

"ಆ ಕಣ್ಣಿಗೆ ಹಚ್ಚಿದ್ದನ್ನು ಕೊಡಬಹುದೇ?" ಎಂದೆ.

"ಕೊಡಬಹುದು. ಇಕಾ ಹಿಡಿ." ಎಂದು ನನ್ನ ಕೈಯಲ್ಲಿ ಒಂದಿಷ್ಟು ಆ ದ್ರವ್ಯವನ್ನು ಕೊಟ್ಟು "ಆದರೆ ಎಚ್ಚರಿಕೆ! ಮನುಷ್ಯಜೀವಕ್ಕೆ ಇಡಿ ಜೀವ-ಮಾನದಲ್ಲಿ ಪರಮಾವಧಿಯೆಂದರೆ ನಾಲ್ಕೇ ಸಲ ಈ 'ದರ್ಶನ ದ್ರವ್ಯ'ವನ್ನು ಉಪಯೋಗಿಸಲು ಅಪ್ಪಣೆಯಿದೆ. ಯಾರಿಗೆ ಒಂದೇ ಸಲ, ಯಾರಿಗೆ ಎರಡು ಸಲ, ಯಾರಿಗೆ ಮೂರು ಸಲ ಹೀಗೆ ಅವರವರ ಜೀವನಯೋಗ್ಯತೆಯ ಪ್ರಕಾರ ಉಪಯೋಗಿಸುವ ಅಪ್ಪಣೆಯಿದೆ. ನೀನಿದನ್ನು ಮೂರು ಸಲ ಉಪಯೋಗಿಸ ಬಹುದು; ಆದರೆ ಕೊನೆಯ ಸಲ ಉಪಯೋಗಿಸುವಾಗ ಎಚ್ಚರಿಕೆ! ಅದು ದೇಹಕ್ಕೆ ತಡೆಯಲಿಕ್ಕಿಲ್ಲ." ಎಂದು ಎಚ್ಚರ ಕೊಟ್ಟು, ತಲೆಯ ಮೇಲೆ ಕೈಯಿಟ್ಟು ವಾತ್ಸಲ್ಯದಿಂದ ಮೈದಡವಿ "ಹೋಗಿ ಬಾ" ಎಂದು ಮರೆಯಾದನು.

ನಾನು ದಿವ್ಯಾಗ್ನಿ, ದರ್ಶನ ದ್ರವ್ಯ ಪಡೆದೆನಲ್ಲ ಎಂಬ ಹಿಗ್ಗಿನಿಂದ ತಿರುಗಿ ನನ್ನ ರಾಜಧಾನಿಗೆ ಹೋಗಬೇಕೆಂದು ಹೊರಟೆ.

ಮುದುಕನನ್ನು ಮೊದಲು ಕಂಡ ಆ ಗುಡ್ಡ ಹತ್ತಿ ಇಳಿದು ಸಮುದ್ರದ ತಡಿಗೆ ಬಂದೆ. ನನ್ನ ಹೋಡಿ ಇನ್ನೂ ಅಲ್ಲಿಯೆ ಇತ್ತು. ಅದರಲ್ಲಿ ಏರಿದೆ. ಗಾಳಿಯೂ ಅನುಕೂಲವಾಗಿತ್ತು. ನನ್ನ ಹೋಡಿ ವೇಗದಿಂದ ಸಾಗಿತು. ಒಂದು ರಾತ್ರಿ, ಒಂದು ಹಗಲು ಸಮುದ್ರದಲ್ಲಿದ್ದೆ. ಮುದುಕ ಕೊಟ್ಟ 'ದರ್ಶನದ್ರವ್ಯ' ಉಪಯೋಗಿಸಬೇಕೆಂದು ಮನಸ್ಸು ಹಾತೊರೆಯುತ್ತಿತ್ತು. ತಡೆದು ತಡೆದು ಕೊನೆಗೆ ಕುತೂಹಲಕ್ಕೆ ಬಲಿಯಾಗಿ ಕಣ್ಣಿಗೆ ಹಚ್ಚಿಕೊಂಡೆ.

ದೃಶ್ಯ ಬದಲಾಯಿತು.

**ಪಾಪ ತಂದ ಮಳೆ.**

ಓಡುವ ಗಾಳಿ ಕದಲದೆ ನಿಂತಿತು. ಸಮುದ್ರದ ನೀರು ಮಾಯವಾಯಿತು. ನನ್ನೆದುರಿಗೆ ಪಾತಾಳದಿಂದ ಸ್ವರ್ಗದ ವರೆಗೆ ಒಂದೇ ಒಂದು ಭವ್ಯ

ತಿರುಪು-ನಿಚ್ಚಣಿಕೆಯೊಂದು ಕಾಣಿಸಿತು. ಆ ನಿಚ್ಚಣಿಕೆಯ ಪ್ರತಿಯೊಂದು ಮೆಟ್ಟಲ ಮೇಲೆ ಅಸಂಖ್ಯ ಜನರು ಹತ್ತಿ ನಿಂತಿದ್ದರು. ಎಲ್ಲ ಜನರ ಮುಖದ ಮೇಲೂ ಗಾಬರಿಯು ಕಳೆ ಒಡೆದು ಕಾಣುತ್ತಿತ್ತು. ಮೇಲ್ಮೆಟ್ಟಲ ಮೇಲೆ ನಿಂತವರು ಕೂಡ ಕೆಳಗಿಳಿದು ಪಾರಾಗಬೇಂದು ಓಡಾಡುತ್ತಿದ್ದರು.

ಈ ಗಾಬರಿಗೆ, ಈ ಓಡಾಟಕ್ಕೆ ಎಂಟೂ ದಿಕ್ಕುಗಳಿಂದ ಒಂದೇ ಸಮನೆ ಸುರಿಯುತ್ತಿದ್ದ ಕೆಂಡದ ಮಳೆಯೆ ಕಾರಣವಾಗಿತ್ತು. ಅದರ ತಾಪವನ್ನು ತಾಳಲಾರದೆ ಎಲ್ಲರೂ 'ಹೋ!' ಎಂದು ಚೀರುತ್ತಿದ್ದರು.

ನಿಚ್ಚಣಿಕೆಯ ಕೆಳಭಾಗಕ್ಕೆ ಕಗ್ಗತ್ತಲು ಕವಿದಿತ್ತು. ನಿಚ್ಚಣಿಕೆಯು ಯಾವ ಆಧಾರದ ಮೇಲೆ ನಿಂತಿತ್ತೊ ಕಾಣುವಂತಿರಲಿಲ್ಲ. ಕೆಳಗಿಳಿದು ಬಂದರೂ 'ಮುಂದೆಲ್ಲಿ ಹೋಗುವದು?' ಎಂಬ ಪ್ರಶ್ನೆಯು ಯಾರನ್ನೂ ಬಾಧಿಸದೆ ಬಿಟ್ಟಿರಲಿಲ್ಲ. ಮೇಲೆ ಕೆಂಡದ ಮಳೆಯ ತಾಪ; ಕೆಳಗೆ ಹೋಗಿ ತಪ್ಪಿಸಿಕೊಳ್ಳುವ ಹಾಗೂ ಇಲ್ಲ. ಹಿಗಾಗಿ ಜನ ಸಮಾಧಾನವಿಲ್ಲದೆ ಕೆಳಗೂ ಮೇಲೂ ಗಡಿಬಿಡಿಯಿಂದ ಓಡಾಡುತ್ತಿದ್ದರು.

ನಿಚ್ಚಣಿಕೆಯ ತುಟ್ಟತುದಿಯ ಮೇಲೆ ಐವರು ಮಪ್ಪಿನ ಮುದುಕರು ಮಳೆಯ ತಾಪವನ್ನು ಶಾಂತರೀತಿಯಿಂದ ಸಹಿಸುತ್ತ ಕದಲದೆ ನಿಂತಲ್ಲಿಯೆ ನಿಂತಿದ್ದರು. ವಯಸ್ಸಾಗಿ ಅವರ ದೇಹವು ಸೋತುಹೋಗಿದ್ದರೂ ಜಗತ್ತನ್ನೇ ಗೆದ್ದವರ ಗೆಲುವು ಅವರ ಮುಖದ ಮೇಲೆ ಇನ್ನೂ ನಲಿದಾಡುತ್ತಿತ್ತು. ಕಣ್ಣಲ್ಲಿಯ ಕಾಂತಿಯು ಕುಂದಿರಲಿಲ್ಲ. ಬೆಳ್ಳಿಯಂತೆ ಹೊಳೆಯುತ್ತಿದ್ದ ಅವರ ಕೂದಲು 'ಬೆಳದಿಂಗಳಂತೆ ಅವರ ಮನಸ್ಸು' ಎಂಬದನ್ನು ಸಾರಿ ಹೇಳುತ್ತಿದ್ದವು. ಕೆಳಗಿನ ಜನರ ಗದ್ದಲವನ್ನು ನೋಡಿ ಕನಿಕರದಿಂದ ಅವರಿಗಾಗಿ ನಿಟ್ಟುಸಿರು ಬಿಡುತ್ತಿದ್ದರೇ ಹೊರತು ತಮ್ಮ ದುಃಖ, ತಮ್ಮ ತಾಪಕ್ಕಾಗಿ ಅಲ್ಲ.

ಅವರಲ್ಲಿ ಒಬ್ಬನು ಇನ್ನೊಬ್ಬನನ್ನು ಕೇಳಿದನು :

**ಒಬ್ಬ :—** ಈ ಕೆಂಡದ ಮಳೆಯನ್ನು ಹೇಗೆ ನಿಲ್ಲಿಸಬೇಕು ?

**ಇನ್ನೊಬ್ಬ :—** ಹೇಗಾದರೂ ಮಾಡಿ ನಿಲ್ಲಿಸಬೇಕು. ಜನ ಸುಟ್ಟು ಹೋಗುತ್ತಿರುವುದನ್ನು ನೋಡಿದಿರಾ ?

**ಮತ್ತೊಬ್ಬ :—** ಮೇಲೆ ಬಂದವರೆಲ್ಲ ಕೆಳಗಿಳಿಯಹತ್ತಿದ್ದಾರೆ. ನಾವು

ಇದನ್ನು ಹಾಗೇ ಬಿಟ್ಟರೆ ನಮ್ಮ ನಿಚ್ಚಣಿಕೆಯೆ ಕಳಚಿಬೀಳುವುದಲ್ಲ ?

**ಮಗದೊಬ್ಬ :**— ನಮ್ಮ ದಾರಿಯಲ್ಲಿದ್ದವರಿಗೆ ಇದೇ ಫಲವಾದರೆ, ನಮ್ಮ ದಾರಿಯನ್ನೆ ಇನ್ನು ಮುಂದೆ ಯಾರೂ ತುಳಿಯಲಕ್ಕಿಲ್ಲ. ಇದು ಯಾರು ತಂದ ಮಳೆಯಿರಬಹುದು ?

**ಒಬ್ಬ :**— ನಮ್ಮ ಪಾಪ ತಂದ ಮಳೆ ಇದು.

**ಇನ್ನೊಬ್ಬ :**— ಹಾಗಾದರೆ ಏನುಪಾಯ ?

**ಮತ್ತೊಬ್ಬ :**— ನಮ್ಮಜ್ಜ ಬಲ್ಲವ, ಅವನನ್ನೇ ಕೇಳಬೇಕು.

**ಇನ್ನೊಬ್ಬ :**— ಹೌದು. ನಮ್ಮಲ್ಲಿ ಆತನೇ ಹಿರಿಯ. ಅನುಭವದ ತಿಳಿ ರಸವನ್ನುಂಡವನು. (ಅಜ್ಜನ ಕಡೆಗೆ ತಿರುಗಿ) ಅಜ್ಜ, ಹೌದೇ ಇದು ನಮ್ಮ ಪಾಪ ತಂದ ಮಳೆ ?

**ಅಜ್ಜ :**— ಹೌದು.

**ಇನ್ನೊಬ್ಬ :**— ಇದೆಂತು ಮುಗಿಯುವುದು ?

**ಅಜ್ಜ :**— ನಾನೇನು ಹೇಳಲಿ ? ಸುರವು ಮಾಡಿದ ಶಕ್ತಿ ಮುಗಿಸಲರಿಯದೇ ? ಬೇಕೆಂದರೆ ಒಂದುಪಾಯ ಮಾಡಬಹುದು.

**ಇನ್ನೊಬ್ಬ :**— ಏನದು ? ಏನದು, ಅಜ್ಜ ?

**ಎಲ್ಲರೂ :**— ಹೇಳಜ್ಜ, ಹೇಳು ! ಕೋಟಿ ಹೊಟ್ಟೆಯ ಉಸಿರು ನಿನ್ನೊಳಗೆ ಬರಲಿ ! ನಿನ್ನ ಪುಣ್ಯದ ಗುಡಿಗೆ ಹೊಂಗಳಸವಿಡಲಿ !

**ಅಜ್ಜ :**— ಈ ಮಳೆಗಾವಿನಿಂದ ಮರೆಯಾಗಿದ್ದ ಗರ್ಭವೊಂದನ್ನು ತರಬೇಕು. ಅದನ್ನು ಬೆಳಸಬೇಕು. ಆ ಕೂಸು ಈ ಮಳೆಯನ್ನು ನಿಲ್ಲಿಸಬಹುದು.

**ಮತ್ತೊಬ್ಬ :**— ಇದು ಸಾಧ್ಯವೇ, ನೆಲದೊಡಲು ಎಲ್ಲವೂ ಬೆಂದಿರುವಾಗ ?

**ಅಜ್ಜ :**— ಅಸಾಧ್ಯವಾದರೆ ಆ 'ಶಕ್ತಿ'ಯೇ ಬರಬೇಕು. ಬೇರೆ ಉಪಾಯವಿಲ್ಲ. ಬೇಕಾದರೆ ಶಕ್ತಿಗೆ ಪ್ರಾರ್ಥಿಸೋಣ.

**ಮಗದೊಬ್ಬ :**— ಹುಡುಕಿಯಾದರೂ ಹುಡುಕೋಣ. ಪ್ರಯತ್ನ ಮಾಡೋಣ. ಸಿಗಬಾರದೇಕೆ ? ಅಸಾಧ್ಯವಾದರೆ ಮುಂದಿನುಪಾಯ ಇದ್ದೇ ಇದೆ. ಏಕೆ ? ಹೊರಡೋಣವೇ ?

ನಾಲ್ವರೂ ಒಪ್ಪಿದರು. ಅಜ್ಜನೊಬ್ಬನನ್ನೇ ಅಲ್ಲಿ ಬಿಟ್ಟು ಗರ್ಭ ಹುಡುಕಿ ತರಲು ಹೊರಟರು. ನಾಲ್ವರೂ ಹುಡುಕಿ ಹುಡುಕಿ ತಮ್ಮ ತಲೆಯ ಮೇಲೆ (ಕುಂಬಳಕಾಯಿಯಂತಹ) ಗರ್ಭಗಳನ್ನು ಹೊತ್ತುಕೊಂಡು ಬಂದು ಅಜ್ಜನೆದುರಿಗೆ ನಿಂತರು. "ಒಡೆಯಿರಿ ಅವನ್ನು" ಎಂದು ಅಜ್ಜ ಹೇಳಿದ. ಅಲ್ಲಿಯೆ ಕೆಳಕ್ಕೆ ಅಪ್ಪಳಿಸಿ ಒಡೆದು ನೋಡಿದರು. ಎಲ್ಲ ಗರ್ಭಗಳಲ್ಲಿಯ ಕೂಸುಗಳೂ ಕೆಂಡದ ಮಳೆಯ ಕಾವಿನಿಂದ ಕಪ್ಪಾಗಿದ್ದವು. ನಿರಾಸೆಗೊಂಡು ಮತ್ತೆ ಹೋಗಿ ಮತ್ತೆ ತಂದರು. ಅವೂ ಹೀಗೇ ಹೊರಟವು. ಮತ್ತೂ ಹೋಗಿ ಬಂದರು. ಮತ್ತೂ ನಿಷ್ಫಲವಾಯಿತು. ಬೇಸತ್ತರು. ಅಜ್ಜನಿಗೇ ಮೊರೆಹೊಕ್ಕರು. ಅಜ್ಜ ಅವರೆಲ್ಲರನ್ನು ಕೂಡಿಕೊಂಡು ಆ 'ಶಕ್ತಿ'ಯ ಪ್ರಾರ್ಥನೆಗೆ ಆರಂಭಿಸಿದ. ಎಷ್ಟೊತ್ತಾದರೂ 'ಶಕ್ತಿ' ಬರಲಿಲ್ಲ. ಅಜ್ಜ ಮೇಲಕ್ಕೊಮ್ಮೆ ದಿಟ್ಟಿಸಿ ನೋಡಿ ಒಮ್ಮೆಲೆ ನಿಚ್ಚಣಿಕೆಯಿಂದ ಕೆಳಕ್ಕೆ ಧುಮುಕಿ ಬಿಟ್ಟ. ಎಲ್ಲರೂ ಗಾಬರಿಯಾದರು. ಕೆಳಕ್ಕೆ ಅವನನ್ನೇ ನೋಡಹತ್ತಿದರು. ಅಜ್ಜ ಇನ್ನೂ ಮಧ್ಯದಲ್ಲಿರುವಾಗಲೆ ಒಬ್ಬ ತರುಣಿ ಬಂದು ಅವನನ್ನು ತಡೆದು "ನಾನೀಗ ಬರುತ್ತೇನೆ ನಡೆ." ಎಂದು ಆತನನ್ನು ಮೇಲಕ್ಕೇ ತೂರಿದಳು. ಅಜ್ಜ ನಾವಿದ್ದಲ್ಲಿ ಬಂದು ನಿಂತ. ಅವನ ಹಿಂದಿನಿಂದಲೇ ಆ ತರುಣಿಯೂ ಆಕಾಶದಲ್ಲಿ ನಡೆಯುತ್ತ ಬಂದು, ನಮ್ಮೆದುರಿನಲ್ಲಿಯೆ ನಿಂತು, ಯಾವು ದಾದರೂ ಒಂದು ಗರ್ಭವನ್ನು ತರಬೇಕೆಂದು ತಿಳಿಸಿದಳು. ಒಬ್ಬ ಹೋಗಿ ಒಂದು ಗರ್ಭ ತಂದಿಟ್ಟನು. ತರುಣಿಯೆ ಅದನ್ನು ಒಡೆದಳು. ಅದರಲ್ಲಿಯ ಕೂಸನ್ನು ತೆಗೆದುಕೊಂಡು ಕೆಳಕ್ಕಿಳಿದು ಆಕಾಶದಲ್ಲಿ ಮಾಯವಾದಳು. ಮಾಯವಾದಲ್ಲಿಯೆ ದೃಷ್ಟಿಯನ್ನಿಟ್ಟು 'ಏನಾಗುವದೋ' ಎಂದು ಉತ್ಸುಕರಾಗಿ ಮುದುಕರೆಲ್ಲ ನೋಡುತ್ತ ನಿಂತರು. ಒಂದು ಕ್ಷಣದಲ್ಲಿ ತರುಣಿ ಮತ್ತೆ ಕಾಣಿಸಿಕೊಂಡಳು. ಕೂಸು ಸಂಗಡ ಇತ್ತು. ಅವಳು ಅದರ ಕೈಯಲ್ಲಿ ತಾನು ತಂದ ಸಣ್ಣ ಬಿಲ್ಲು ಬಾಣ ಕೊಟ್ಟು "ಆಕಾಶಕ್ಕೆ ಹೊಡೆ" ಎಂದು ಬೊಟ್ಟುಮಾಡಿ ತೋರಿಸಿದಳು. ಆ ಕೂಸು ನಗುತ್ತ ಆಕಾಶಕ್ಕೆ ಬಾಣ ಬಿಟ್ಟಿತು. ಬಾಣ ಆಕಾಶದಲ್ಲಿ ಎತ್ತೋ ಹೋಗಿ ಕಾಣದಂತಾಯಿತು. ಆ ಕೂಸನ್ನು ಅಲ್ಲಿಯೆ ಬಿಟ್ಟು ತರುಣಿ ಮತ್ತೆ ಮರೆಯಾದಳು. ಎಲ್ಲರೂ ಬಾಯಿಬಿಟ್ಟು ಆಕಾಶದ ಕಡೆಗೇ ನೋಡುತ್ತ ನಿಂತಿದ್ದರು. ಒಂದು ಕ್ಷಣದಲ್ಲಿ

ಸುರಿಯುತ್ತಿದ್ದ ಕೆಂಡದ ಮಳೆ ನಿಂತುಹೋಗಿ ಸುವಾಸದಿಂದ ತುಂಬಿದ ಬಿಳಿ ಹೂಗಳು ಎಂಟೂ ದಿಕ್ಕುಗಳಿಂದ ಸುರಿದು ಬೀಳಹತ್ತಿದವು. ಅವುಗಳ ಸುವಾಸನೆಯು ಎಲ್ಲೆಲ್ಲಿಯೂ ಇಡುಗಿತು. ಜನ ಆನಂದದಿಂದ ಕುಣಿದಾಡ ಹತ್ತಿತು. ನಿಚ್ಚಣಿಕೆಯ ತುಟ್ಟತುದಿಗೆ ನಿಂತ ಮುದುಕರು ಮಾತ್ರ ಯೋಗ ಮುದ್ರೆಯನ್ನು ತಳೆದು ಸ್ಥಿತಪ್ರಜ್ಞರಂತೆ ಕೆಳಗೂ ಮೇಲೂ ನೋಡುತ್ತ ನಿಂತಿದ್ದರು. ಬಿಟ್ಟ ಆ ಬಾಣವು ಕಾಣದಂತೆ ಎಲ್ಲ ಕಡೆಗೂ ತಿರುಗಾಡಿ ಬಂದು ಆ ಕೂಸಿನ ಎದೆಯನ್ನೆ ಹೊಕ್ಕಿತು. "ಅವ್ವಾ!" ಎಂದಿತು ಕೂಸು. ತರುಣಿ ಬಂದು "ಇದು ನಿನ್ನ ಎದೆ-ಬಾಣ. ನಿನ್ನಲ್ಲಿಯೆ ಇರಬೇಕು ಅದು. ಶರಪಂಜರದಲ್ಲಿ ಮಲಗಿದ್ದ ಭೀಷ್ಮರಿಗೆ ನಿರಂತರ ಜಲಾಮೃತವನ್ನು ಸುರಿಸುತ್ತಿದುದು ಇದೇ ಬಾಣ. ಇದಕ್ಕೆ ದಿವ್ಯಶಕ್ತಿಯಿದೆ. ವಿಶ್ವವನ್ನು ಸುಡುವ ಪ್ರಳಯಾಗ್ನಿಯನ್ನೂ ಶಮನಮಾಡುವ ತೇಜಸ್ಸಿದೆ ಇದಕ್ಕೆ. ಇದು ಎಲ್ಲರ ಎದೆಯಲ್ಲಿಯೂ ಇದೆ." ಎಂದು ಹೇಳಿ ಆ ತರುಣಿ ಮತ್ತೆ ಮಾಯವಾದಳು.

(೨೨-೨-೧೯೩೨)

ದರ್ಶನ ಮುಗಿಯಿತು. ಎಚ್ಚರಾಯಿತು. ನೋಡಿದೆ. ನನ್ನ ಹೋಡಿ ದಂಡೆಗೆ ಬಂದಿತ್ತು. ಇಳಿದು ವಿಸ್ತಾರವಾದ ಉಸುಬಿನ ಬೈಲನ್ನು ದಾಟಿ, ಪರ್ವತಗಳ ಮೇಲೆ ಪರ್ವತಗಳನ್ನು ಹತ್ತಿ ಇಳಿದು, ಹಳ್ಳಕೊಳ್ಳಗಳನ್ನು ದಾಟಿ, ದುರ್ಗಮ ಅರಣ್ಯದೊಳಗಿಂದ ಹಾಯ್ದು, ನದಿಯನ್ನು ಈಸಿ ಪಾರಾಗಿ ಅದರ ದಂಡೆಯ ಮೇಲಿದ್ದ ಪೋಟುಮಾವಿನ ಮರಕ್ಕೆ ಬಂದೆ. ಅದೀಗ ಚಿಗಿತು ಫಲ ಬಿಟ್ಟಿತ್ತು. ವಿಶ್ರಾಂತಿಗೆಂದು ಅದರ ಬಡ್ಡಿಗೆ ಆತುಕೊಂಡು ಕುಳಿತೆ. ಹಾಯೆನಿಸಿತು. ಒಳಗಿನಿಂದ ಅಹಂಕಾರದ ಹೊಗೆ ಬಂದು ಕಣ್ಣಿಗೆ ಬಡಿಯುತ್ತಿತ್ತು. ಕಣ್ಣು ನೀರು ಸುರಿಸುತ್ತಿತ್ತು. ಸುರಿಸಿ ಸುರಿಸಿ ಕಣ್ಣು ಮುಚ್ಚಿಕೊಂಡವು. ನಿದ್ರೆ ಆವರಿಸಿತು. ಮನಸ್ಸಿನಲ್ಲಿದ್ದದ್ದೆ ರೂಪುಗೊಂಡು ಕನಸಿನಲ್ಲಿ ಕಂಡಿತು.

# ವಿಶ್ವರೂಪ

ಒಂದು ಅಟ್ಟಡವಿಯಲ್ಲಿ ಹೊರಟಿದ್ದೆ. ಸೂರ್ಯಾಸ್ತಸಮಯವಾಗಿತ್ತು. ಹಸಿರುಮುರಿಯುತ್ತಿದ್ದ ಅಲ್ಲಿಯ ನೆಲದ ಮೇಲೆ ಆ ಸಂಧ್ಯಾಸೂರ್ಯನ ಕೆಂಬೆಳಕು ಹರಹಿಬಿದ್ದದರಿಂದ ಚಿರಯೌವನಕ್ಕೆ ಯೋಗಕಾಂತಿಯ ಒಪ್ಪವನ್ನು ಹಾಕಿದಂತಾಗಿತ್ತು.

ನನ್ನ ಮೈಮೇಲೆ ಕೌಪೀನವೊಂದನ್ನು ಬಿಟ್ಟು ಮತ್ತೇನೂ ಇರಲಿಲ್ಲ. ಕಾಲಲ್ಲಿ ಕಡಾವಿಗೆ, ಕೈಯಲ್ಲಿ ಕಮಂಡಲು, ಕೊರಳಲ್ಲಿ ತುಳಸಿಯಮಾಲೆ. ನನ್ನ ಎದೆಯ ಮೇಲರ್ಧಭಾಗವನ್ನು ಬೆಳೆದಿಳಿದು ಬಂದ ನನ್ನ ಬಿಳಿಗಡ್ಡಗಳು ಮುಚ್ಚಿದ್ದವು. ತಲೆಗೂದಲು ಬೆನ್ನಿನ ತುಂಬ ಹರಹಿದ್ದವು.

ನನ್ನ ಆಗಿನ ಮುಖಭಾವವು ಆತ್ಮಪ್ರಜ್ಞೆಯ ಆನಂದದ ಬೆಳಕನ್ನು ತೋರಿಸುತ್ತಿದ್ದರೂ ಮತ್ತೆ ಮತ್ತೆ ನುಗ್ಗಿಬರುತ್ತಿದ್ದ ಅಹಂಕಾರದ ಕತ್ತಲೆಗೂ ಎಡೆಗೊಟ್ಟಿತ್ತು. ನನ್ನ ಮುಗುಳುನಗೆಯಲ್ಲಿ ಸಮರಸಕ್ಕಿಂತಲೂ ಯೋಗ ಸಿದ್ಧಿಯ ಅಹಂಕಾರ ಹೆಚ್ಚಿದ್ದಿತು. "ನಾನು ಬ್ರಹ್ಮಸೂತ್ರವನ್ನು ಅರಿತಿದ್ದೇನೆ. ಬ್ರಹ್ಮಾಂಡವನ್ನೆಲ್ಲ ಬಿಗಿದಿಟ್ಟ ಆ ಏಕಸೂತ್ರದ ಮರ್ಮವು ನನಗೇ ಗೊತ್ತಿದೆ. ದಿವ್ಯಾಗ್ನಿಯನ್ನು ಪಡೆದಿದ್ದೇನೆ. ಇನ್ನೇನಿದೆ? ರೂಪಭೇದ ಮರೆಯಾಯಿತು. ಸೌಂದರ್ಯ ಎಲ್ಲೆಲ್ಲಿಯೂ ಒಂದೇ. ಕುರೂಪದಲ್ಲಿಯೂ ಸೌಂದರ್ಯವಿದೆ." ಎಂದು ನನಗೆ ನಾನೇ ಹೇಳಿಕೊಳ್ಳುತ್ತಿದ್ದೆ. ರಾಜ್ಯವನ್ನು ಕಡೆಗಣಿಸಿ, ಸಂಸಾರವನ್ನು ತ್ಯಾಗಮಾಡಿ, ಜಗತ್ತನ್ನು ತೃಣೀಕರಿಸಿ ಓಡಿ ಬಂದಿದ್ದೆ. ನನ್ನ ಮನಸ್ಸಿನ ಮೆಟ್ಟಲು ಸಂಸಾರದಲ್ಲಿದ್ದವರಿಗೆ ನಿಲುಕದ್ದೆಂದು ನನ್ನ ಆಗಿನ ಭಾವನೆ.

ಹೀಗೇ ಮುಂದೆ ಸಾಗಿರುವಾಗ ಸಮೀಪದಲ್ಲಿಯೆ ಹರಿಯುವ ನೀರಿನ ಜುಳುಜುಳು ನಾದವು ಕೇಳಿಬಂತು. ಅದರ ಜಾಡನ್ನೆ ಹಿಡಿದು ಮತ್ತೆ ಮುಂದೆ ನಡೆದೆ.

ದಟ್ಟವಾಗಿ ಬೆಳೆದಿದ್ದ ಗಿಡಗಳ ಮರೆಯನ್ನು ದಾಟಿದೊಡನೆ ವಿಶಾಲವಾದ ನದಿಯ ಪಾತ್ರದಲ್ಲಿ ಎರಡೂ ದಂಡೆಗಳನ್ನು ಬಿಟ್ಟು ನಡುವೆ ಎರಡು ಮೂರು ಸೀಳೊಡೆದು ಹರಿಯುತ್ತಿದ್ದ ನೀರನ್ನು ನೋಡಿದೆ. ಹೋಗಿ ಅದರಲ್ಲಿ ಕೈಕಾಲು ತೊಳೆದುಕೊಂಡು ಅಲ್ಲಿಯೆ ಒಂದು ಬಂಡೆಯ ಮೇಲೆ ಕುಳಿತು ಸಂಧ್ಯಾವಂದನೆಯನ್ನು ಮುಗಿಸಿದೆ.

ಮೊದಲಿನ ಆಸನವನ್ನು ಬದಲಿಸಿ ಸೂರ್ಯ ಮುಳುಗುತ್ತಿದ್ದ ದಿಕ್ಕಿನ ಕಡೆಗೇ ನೋಡುತ್ತ ಕುಳಿತುಕೊಂಡೆ: ನೋಡುತ್ತಿದ್ದ ಹಾಗೆಯೆ ಸೂರ್ಯನಿಗೆ ಮುಖವಾಯಿತು. ಮುಖದ ಮೇಲೆ ಮುಗುಳು ನಗೆಮೂಡಿತು. ಅರೆಮುಚ್ಚಿದ ಅವನ ಕಣ್ಣುಗಳಿಂದ ಹೊರಬಿದ್ದ ಪ್ರೇಮಮಯ ಕಾಂತಿಯು ಭೂದೇವಿಯ ಮೇಲೆ ಅಮೃತಸಿಂಚನ ಮಾಡುತ್ತಿರುವಂತೆ ಕಂಡಿತು. ನೀರಿಗೆ ಮುಟ್ಟುತ್ತ ಬಂದಿದ್ದ ಅವನ ಬಾಯಿಯು ಶಾಂತಿಸಾಗರದ ನೀರನ್ನು ಕುಡಿದು ತಣಿಯಬೇಕೆಂಬ ಅವನ ಅಪೇಕ್ಷೆಯ ಆತುರವನ್ನು ತೋರಿಸುತ್ತಿತ್ತು.

ಅವನು ನನ್ನನ್ನು ನೋಡಿ ಬಾಯಿ ತೆರೆದು ಒಮ್ಮೆಲೆ ನಕ್ಕನು. ಆಗ ಅವನ ಬಾಯೊಳಗಿಂದ ಎರಡು ಪಕ್ಷಿಗಳು ಹಾರಿ ಹೊರಗೆ ಬಂದವು. ವಿಸ್ಮಯದಿಂದ ನೋಡಹತ್ತಿದೆ. ಕ್ಷಣಾರ್ಧದಲ್ಲಿ ಪಕ್ಷಿಗಳೂ ಮಾಯವಾದವು; ಸೂರ್ಯನೂ ಮಾಯವಾದನು.

* * * *

“ಬ್ರಹ್ಮಸೂತ್ರವನ್ನು ಅರಿತಿದ್ದೇನೆಂದೆನಲ್ಲವೇ? ವಿಶ್ವದ ವೈಷಮ್ಯದ ಅಂತರಾಳದಲ್ಲಿ ಹುದುಗಿದ್ದ ಏಕಸೂತ್ರವನ್ನು ಕಂಡಿದ್ದೇನೆಂದೆನಲ್ಲವೆ? ಅದು ಹೇಗೆ? ಅದು ಹೇಗೆ? ಹೇಗೆ?” ಎಂದು ಎಷ್ಟೊತ್ತಿನ ವರೆಗೆ ಆತ್ಮನಿರೀಕ್ಷಣೆಯನ್ನು ಮಾಡಿಕೊಂಡರೂ ಒಗಟೆ ಒಡೆಯಲಿಲ್ಲ.

ನನ್ನ ಈ ಸ್ಥಿತಿ ನೋಡಿ ಗಹಗಹಿಸಿ ನಕ್ಕಹಾಗೆ ಆಕಾಶದಲ್ಲಿ ಗುಡುಗಿತು. ಮುಖವನ್ನು ಮೇಲಕ್ಕೆತ್ತಿ ನೋಡಿದೆ. ಕಾರ್ಮೋಡಗಳು ಆಕಾಶವನ್ನು ತುಂಬಿದ್ದವು. ಇಂದ್ರದೇವನ ಅವಸರದ ಸಹಿಯಂತೆ ಕೋಲ್ಮಿಂಚು ಮೂಡಿತು. ಬಿರುಗಾಳಿ ಬಿಮ್ಮೆಂದು ಬೀಸತೊಡಗಿತು. ಆಗ ನನ್ನ ಬೆನ್ನ ಮೇಲೆ ‘ರಪ್’ ಎಂದು ಯಾರೋ ಹೊಡೆದಂತಾಯಿತು. ಗಾಬರಿಯಾಗಿ ಹಿಂತಿರುಗಿ ನೋಡಿದೆ. ಕತ್ತಲೆಯಿದ್ದುದರಿಂದ ಯಾವುದೂ ಸ್ಪಷ್ಟವಾಗಿ

ಕಾಣಿಸಲಿಲ್ಲ. ಏನಿದೆ? ನೋಡಬೇಕೆಂಬ ಕುತೂಹಲದಿಂದ ಕುಳಿತವನು ಎದ್ದು ನಿಂತೆ. ಆಗ ಮಿಂಚಿತು. ಮಿಂಚಿನ ಬೆಳಕಿನಲ್ಲಿ ನೋಡಿದೆ. ದೂರದಲ್ಲಿ ಒಂದು ಕಪ್ಪು ಪದಾರ್ಥವು ಬಿದ್ದಂತೆ ಕಂಡಿತು. ಹತ್ತಿರ ಹೋಗಿ ನೋಡ ಬೇಕೆಂದು ನಾಲ್ಕು ಹೆಜ್ಜೆ ಮತ್ತೆ ಮುಂದೆ ನಡೆದೆ. ಅಲ್ಲಿಂದ ನೋಡಲು ಆ ಪದಾರ್ಥವೇ ಕಾಣಲಿಲ್ಲ. ಮತ್ತೆ ಮಿಂಚಿತು. ಅದು ಮತ್ತೆ ದೂರದಲ್ಲಿ ಕಂಡಿತು. ಮತ್ತೆ ಮುಂದೆ ನಡೆದೆ. ಹತ್ತಿರ ಹೋಗಿ ನೋಡಿದಾಗ ಕಾಣಲಿಲ್ಲ. ಮಿಂಚಿದಾಗ ಮತ್ತೆ ಕಂಡಿತು. ಮತ್ತೆ ಮುಂದೆ ನಡೆದೆ. ಹೀಗೆಯೆ ನಡೆ ಯಿತು. ಅಷ್ಟೊತ್ತಿಗೆ ಹನಿಯೊಡೆಯಿತು. ಮಳೆಯಿಂದ ತಪ್ಪಿಸಿಕೊಳ್ಳ ಬೇಕೆಂದು ಅಲ್ಲಿಯೆ ಒಂದು ಗಿಡದ ಬುಡಕ್ಕೆ ಹೋಗಿ ನಿಂತೆ. ಮಳೆಯು ಜೋರಾಗಿ ಒಂದೇಸವನೆ ಸುರಿಯಹತ್ತಿತು. ಗಿಡದ ಮರೆಯಿದ್ದರೂ ಮೈಯೆಲ್ಲ ತೊಯ್ದುಹೋಯಿತು. ನಡುಗು ಹಿಡಿಯಿತು. ಅಪ್ಪುಗೈಹಚ್ಚಿ ಕೊಂಡು ಹಾಗೇ ನಿಂತೆ.

ಐದ್ಹತ್ತು ನಿಮಿಷಗಳ ನಂತರ ಒಮ್ಮೆಲೆ ಮಳೆ ನಿಂತಿತು. ಗಾಳಿಯೂ ಹಗುರಾಯಿತು. ಬೆಳದಿಂಗಳೂ ಬಿತ್ತು. ಮನಸ್ಸಿಗೆ ನೆಮ್ಮದಿಯೆನಿಸಿತು. ಆಕಾಶದ ಕಡೆಗೆ ನೋಡಿದೆ. ಪೂರ್ಣಚಂದ್ರ ಕಾಣಿಸಿದ. ನೋಡಿ ಮನಸ್ಸು ಅರಳಿತು. ಹಾಗೇ ಮೇಲಿದ್ದ ದೃಷ್ಟಿಯನ್ನು ಕೆಳಗಿಳಿಸುತ್ತ ಎದುರಿಗೆ ನೋಡಿದೆ. ಕಪ್ಪು ಆಕಾರವೊಂದು ನಿಂತಿರುವಂತೆ ಕಂಡಿತು. ಬೆಚ್ಚಿ ದಿಟ್ಟಿಸಿ ನೋಡಿದೆ. ಹೆಣ್ಣು ರೂಪವೆಂಬಂತೆ ಕಂಡಿತು. ನೋಡುನೋಡುತ್ತಿರು ವಂತೆಯೆ ಆ ಆಕಾರವು ಆಕಾಶದ ವರೆಗೆ ಬೆಳೆದು ನಿಂತಿತು. ಆಕಾಶದಲ್ಲಿಯ ನಕ್ಷತ್ರಗಳೆಲ್ಲ ಆ ಆಕಾರದ ಮೈಯಲ್ಲಿ ಕೂಸಿನ ಮುಖಗಳಾಗಿ ತೋರಿದವು. ನನ್ನನ್ನೂ ತನ್ನಲ್ಲಿ ಅಡಗಿಸಿಕೊಳ್ಳಬೇಕೆಂದು ಬಗ್ಗಿ ತನ್ನ ಆ ಅಗಾಧ ಮಹಾ ಕೈಯನ್ನು ಚಾಚಿತು ಆ ಆಕಾರ. ಅನಿರ್ವಚನೀಯ ಒಂದು ಮಹಾರಸವು ನನ್ನಲ್ಲಿ ಉಕ್ಕಿ ಬಂತು. ನನ್ನ ಕಣ್ಣು ಅರೆಮುಚ್ಚಿದವು.

ತಿರುಗಿ ತೆರೆಯುವಷ್ಟರಲ್ಲಿ ಆ ಆಕಾರ ಮಾಯವಾಗಿದ್ದಿತು. ಅದರ ಸ್ಥಳದಲ್ಲಿ ಮೊದಲು ಕಂಡ ಆ ಕಪ್ಪು ಪದಾರ್ಥವು ಬಿದ್ದಿತ್ತು. ಹತ್ತಿರ ಹೋಗಿ ನೋಡಿದೆ. ಯಾವುದೋ ಪಕ್ಷಿಯಾಗಿತ್ತು. ಆ ಸಂಧ್ಯಾಸೂರ್ಯನ ಮುಖದೊಳಗಿಂದ ಹಾರಿ ಬಂದ ಪಕ್ಷಿಯಿರಬಹುದೇ? ಎಂದುಕೊಂಡೆ. ಅದು

ಪ್ರಾಣಸಂಕಟಕ್ಕಾಗಿ ಬಾಯಿಬಿಡುತ್ತಿತ್ತು. ಬಗ್ಗಿ ಕೈಯಲ್ಲಿ ತೆಗೆದುಕೊಂಡೆ. 'ಆತ್ಮ ಎಲ್ಲಿಯೂ ಒಂದೇ. ಅದು ಇಡೀ ವಿಶ್ವವನ್ನೆ ತುಂಬಿಕೊಂಡಿದೆ. ಪ್ರಾಣ ತಿಳಿಯದೆ ಇನ್ನೂ ಸಂಕಟಪಡುತ್ತಿದೆ. ನನ್ನದೇನು ಹೆಚ್ಚು? ಇದರದೇನು ಕಡಿಮೆ?' ಎನಿಸಿತು. ನನಗೆ ಇಲ್ಲಿಯವರೆಗೆ ಈ ತರಹದ ಮಧುರ ಸಂವೇದನೆಯ ಅನುಭವ ಬಂದಿರಲಿಲ್ಲ. ಅದನ್ನು ಮುದ್ದಿಡಬೇಕೆನ್ನುವಷ್ಟು ನನ್ನ ಆ ಮಧುರಭಾವ ಉತ್ಕಟವಾಯಿತು. ಅಷ್ಟರಲ್ಲಿ ಬೆನ್ನಮೇಲೆ ಯಾರೋ ಹೊಡೆದಂತಾಯಿತು. ಹೊರಳಿ ನೋಡುವದರೊಳಗಾಗಿ ಕೈಯಲ್ಲಿಯ ಪಕ್ಷಿಯೆ ಮಾಯವಾಗಿತ್ತು.

ಈ ಚಮತ್ಕಾರವನ್ನೆ ನೆನೆಯುತ್ತ ಒಂದೆರಡು ಹೆಜ್ಜೆ ಮುಂದೆ ಹೋಗುವದರೊಳಗಾಗಿ ಮತ್ತೆ ಆ ಆಕಾರವು ಕಾಣಿಸಿಕೊಂಡಿತು. ಈ ಸಲ, ಅದು ಪುರುಷಾಕಾರವಿರಬೇಕೆಂದೆನಿಸಿತು. ಭೂಮಿಯಿಂದ ಆಕಾಶದ ಆಚೆಗೆ ಬೆಳೆದು ನಿಂತಿತ್ತು. ಇಡಿ ವಿಶ್ವ ಅದರ ಕೈಯಲ್ಲಿಯ ಕಮಲದ ಮೊಗ್ಗೆಯಾಗಿತ್ತು. ಕಣ್ಣುಗಳೊಳಗಿಂದ ದಿವ್ಯಪ್ರಕಾಶವು ಹೊರಚಿಮ್ಮುತ್ತಿತ್ತು. ಶರೀರದಲ್ಲಿಯೆಲ್ಲ ಹಸುಗೂಸುಗಳ ಮುಖಗಳು ಕಾಣುತ್ತಿದ್ದವು. ಅವುಗಳಲ್ಲಿ ಕೆಲವು ಕಣ್ಣು ತೆರೆದಿದ್ದವು, ಕೆಲವು ಮುಚ್ಚಿದ್ದವು; ಕೆಲವು ನಗುತ್ತಿದ್ದವು, ಕೆಲವು ಅಳುತ್ತಿದ್ದವು. ಎರಡೂ ಕೈಗಳಲ್ಲಿ ಎರಡು ಕೂಸುಗಳನ್ನು ಹಿಡಿದಿತ್ತು. ಒಂದು ಅತ್ಯಂತ ಸುಂದರವಾಗಿತ್ತು, ಮನೋಹರವಾಗಿತ್ತು, ಮುಗುಳುನಗೆ ನಗುತ್ತಿತ್ತು. ಇನ್ನೊಂದು ಅಷ್ಟೇ ಕುರೂಪಿಯಾಗಿತ್ತು, ಜಿಗುಪ್ಸೆ ಹುಟ್ಟಿಸುತ್ತಿತ್ತು, ಬಿಕ್ಕಿಬಿಕ್ಕಿ ಅಳುತ್ತಿತ್ತು. ನನ್ನ ದೃಷ್ಟಿ ಒಮ್ಮೆಲೆ ಆ ಸುಂದರ ಕೂಸಿನ ಕಡೆಗೇ ಹರಿಯಿತು. ಅದನ್ನು ಪಡೆಯಬೇಕೆಂಬ ಆಶೆಯೂ ಬಲಿಯಿತು. ಕೈಗಳು ತಾವಾಗಿಯೆ ಮುಂದಾದವು. ಆಕಾರವು ಗಹಗಹಿಸಿ ನಕ್ಕು ಆ ಕುರೂಪಿ ಕೂಸನ್ನು ಮುಂದಾದ ನನ್ನ ಕೈಗಳಲ್ಲಿ ಒಗೆದು "ಆತ್ಮ ಎಲ್ಲಿಯೂ ಒಂದೇ. ಇದೂ ನಿನ್ನ ಕೂಸು!" ಎಂದುಸಿರಿ ಮಾಯವಾಯಿತು.

(೨೮-೧-೧೯೨೯)

ಆ ಕೂಸು ನನ್ನ ಕೈಗೆ ಸಿಗದೆ ನನ್ನ ಎದೆಯ ಮೇಲೆ ಬಿದ್ದಂತಾಯಿತು. 'ಹಾ!' ಎನ್ನುತ್ತ ಎಚ್ಚರಗೊಂಡು ಕಣ್ಣು ತೆರೆದೆ. ಒಂದು

ಟೆಂಗಿನಕಾಯಂತಹ ದೊಡ್ಡ ಮಾವಿನ-ಪಾಡು ಗಿಡದಿಂದ ಉದುರಿ ನನ್ನ ಎದೆಯ ಮೇಲೆ ಬಿದ್ದು ಅಲ್ಲಿಯೆ ಉರುಳಿತ್ತು.

ಪಾಡನ್ನು ಅಲ್ಲಿಯೆ ಇಟ್ಟು ನದಿಯಲ್ಲಿ ಕೈಕಾಲು ತೊಳೆದುಕೊಂಡು ಬಂದು, ಆ ಪಾಡನ್ನು ತೆಗೆದುಕೊಂಡು ಮತ್ತೆ ಹೊರಟೆ.

ನರಭಕ್ಷಕನು ಹಾಳು ಮಾಡಿದ ಮಾನವತೋಟದಲ್ಲಿ ಹಾಯ್ದು, ಅರಣ್ಯದಲ್ಲಿಯ ಆ ಗುಹೆಯನ್ನು ದಾಟಿ, ನನ್ನ ರಾಜ್ಯದ ಸೀಮೆಗೆ ಬಂದು ಮುಟ್ಟಿದೆ.

ಕಾಲುದಾರಿ ಹಿಡಿದು ಹೊರಟಾಗ ದೂರದಿಂದಲೆ ಕೋಟೆಯ ಗೋಡೆಗಳು ಕಾಣಹತ್ತಿದವು. ಪ್ರಿಯಜನರನ್ನು ಕಾಣುವ ಆತುರ ಹೆಚ್ಚಾಗಿ ನಡಿಗೆ ಜೋರಾಯಿತು. ಮನಸ್ಸು ಅದಕ್ಕೂ ಜೋರಾಗಿ ಮುಂದೆ ಓಡಿ ಹೋಗಿ, ಅರಮನೆಯನ್ನಾಗಲೆ ಹೊಕ್ಕಿತು. ಸುವರ್ಣಪಂಜರದಲ್ಲಿದ್ದ ಪಂಡಿತ-ಪಕ್ಕಿಯನ್ನು ಮಾತನಾಡಿಸಿತು ; ಶೃಂಗಾರಗೃಹದಲ್ಲಿ ಹೋಗಿ ಹಂಸತೂಲಿಕಾ ಮಂಚದ ಮೇಲೆ ಒರಗಿ ಕುಳಿತಿತು ; ಅಂತಃಪುರದ ದಾಸಿಯರೆಲ್ಲ ಸಲ್ಲಿಸಿದ ಮರ್ಯಾದೆಯನ್ನು ಸ್ವೀಕರಿಸಿ, ಅವರ ಕ್ಷೇಮಸಮಾಚಾರವನ್ನು ಬರಿ ಕಣ್ಸನ್ನೆಯಿಂದ ಕೇಳಿತು ; ತನ್ನೆತ್ತರ ಬೆಳೆದಿದ್ದ ರಾಜಕುಮಾರನನ್ನು ನೋಡಿ ಹೃದಯವುಕ್ಕಿ ಅಪ್ಪಿಕೊಂಡಿತು ; ಕೃಶಳಾದ ತನ್ನರಸಿಯನ್ನು ತಬ್ಬಿಕೊಂಡು ಮೂಕವಾಗಿ ಕಣ್ಣೀರನ್ನು ಸುರಿಸಿತು; ಕಣ್ಣು ಕಾಣದ ಮುಪ್ಪಿನ ತಾಯಿಯ ಕಾಲಿಗೆರಗಿತು ; ಅಕ್ಕ ಶರೂ, ತಂಗಿ ನಿರ್ಮಲಾ ಇವರನ್ನು ಮಾತನಾಡಿಸಿ ಸಂತಯಿಸಿತು ; ಅರಮನೆಯಲ್ಲೆಲ್ಲಾ ಓಡಾಡಿತು. ರಾಜ ತಿರುಗಿ ಬಂದಿದ್ದಾನೆಂದು ಮಂಗಲವಾದ್ಯಗಳು ಮೊಳಗಿದವು ; ಮಂತ್ರಿಸಭೆ ಸೇರಿತು. ಸ್ವಾಗತೋತ್ಸವದ ಸಿದ್ಧತೆ ನಡೆಯಿತು. ರಾಜಧಾನಿ ಶೃಂಗರಿಸಲ್ಪಟ್ಟಿತು ; ಪ್ರಜರ ಉತ್ಸಾಹ ಎಲ್ಲೆಲ್ಲಿಯೂ ಗುಡಿಕಟ್ಟಿ ನಿಂತಿತು ; ರಾಜಸಭೆ ನೆರೆದಿತು ; ರಾಜ ಮಹಾರಾಜರು ದೂರದೂರದಿಂದ ಮರ್ಯಾದೆ ತಂದಿದ್ದರು; ಮಂತ್ರಿಗಳೆಲ್ಲ ಟೊಂಕಕಟ್ಟಿ ನಿಂತಿದ್ದರು ; ಪ್ರಜಾಸಮೂಹ ಸಮುದ್ರದಂತೆ ಭೋರ್ಗರೆಯುತ್ತಿತ್ತು ; ಮರ್ಯಾದೆಸೂಚಕ ವಾದ್ಯಗಳಾದವು ; ವಂದಿಮಾಗಧರು ಸ್ತುತಿಪಾಠ ಹೇಳಿದರು ; ರಾಜಪರಿವಾರ ಬಂದು ಸಿಂಹಾಸನದ ಹಿಂದೆ ಕುಳಿತಿತು ; ಇನ್ನು ಸಿಂಹಾಸನವನ್ನೇರಬೇಕೆಂದು ಕಾಲೆತ್ತುವ ಹೊತ್ತಿಗೆ ಯಾರೊ

ತಡೆದಂತಾಯಿತು. ಕೋಟೆಯ ದ್ವಾರಪಾಲಕ ಎದುರುಗಡೆಯಿಂದ ಬರುತ್ತಿದ್ದ ರಾಜಮೆರವಣಿಗೆಗೆ ದಾರಿಮಾಡಿಕೊಡಲು ನನ್ನನ್ನು ತಡೆಹಿಡಿದಿದ್ದ! ಸುಖಸ್ವಪ್ನಚಿತ್ರಗಳನ್ನು ಕಾಣುವುದರಲ್ಲಿ ತಲೀನವಾಗಿದ್ದ ನನ್ನ ಮನಸ್ಸನ್ನು ಚಾಟಿಯಿಂದ ಹೊಡೆದು ಹಿಂದೆ ಜಗ್ಗಿ ನಿಲ್ಲಿಸಿದಂತಾಯಿತು. ಒಂದು ಕ್ಷಣ ರಾಜಸಭಾವ ದೇಹದಲ್ಲೆಲ್ಲ ಹರಿದಾಡಿತು. ಹುಬ್ಬು ಗಂಟಿಕ್ಕಿದವು; ಕಣ್ಣು ಮಿಂಚಿದವು ; ಮೂಗು ಹಿಗ್ಗಿತು ; ಹಲ್ಲು ತುಟಿಯನ್ನು ಕಚ್ಚಿತು ; ಬಲಗೈ ಟೊಂಕಕ್ಕೆ ಹೋಯಿತು. ಆದರೆ ಮರುಕ್ಷಣದಲ್ಲಿಯೆ ವಿವೇಕ, ನಗೆಯನ್ನು ಕರೆಯಿಸಿ ಎಲ್ಲವನ್ನೂ ಮರೆಮಾಡಿಸಿತು. ದ್ವಾರಪಾಲಕನಿಗೆ ಯಾವುದೂ ಗೊತ್ತಾಗಲಿಲ್ಲ. ನಾನೂ ಸರಿದು ಒಂದು ಮಗ್ಗುಲಿಗೆ ನಿಂತೆ.

ಕಹಳೆ, ಕೊಂಬು, ನಗಾರಿ, ನವಬತ್ತು ಮೊದಲಾದ ವಾದ್ಯಗಳೆಲ್ಲ ಮೊದಲು ಬಂದವು. ಅಲ್ಲಿಂದ ಕುದುರೆಸ್ವಾರರು, ಕಾಲಾಳು, ರಥಗಳು, ಅಂಬಾರಿ ಹೊತ್ತ ಆನೆಗಳು, ಪಟ್ಟದಾನೆ ಪಟ್ಟದ ಕುದುರೆಗಳು, ವೇದಘೋಷ ಮಾಡುತ್ತಿದ್ದ ಬ್ರಾಹ್ಮಣರು, ಅವರ ನಂತರ ರಥಾರೂಢ ರಾಜ, ಆನಂತರ ಒಂದು ಆನೆಯ ಮೇಲೆ ಅಂಬಾರಿಯಲ್ಲಿ ಸುವರ್ಣಕುಂಭಗಳೆರಡು, ಬಂದು ಹೋದವು. ಮೆರೆವಣಿಗೆ ಉದ್ದೋ ಉದ್ದವಾಗಿತ್ತು. ಒಂದು ಮೂಲೆಯಲ್ಲಿ ನಿಂತುಕೊಂಡ ನನ್ನನ್ನು ಯಾರೂ ಗುರುತಿಸಲಿಲ್ಲ, ಗುರುತಿಸುವಂತೆಯೂ ಇರಲಿಲ್ಲ.

ಮೆರೆವಣಿಗೆಯೆಲ್ಲ ಹೊರಗೆ ಹೊರಟುಹೋದ ಮೇಲೆ ದ್ವಾರಪಾಲಕನನ್ನು ರಂಬಿಸಿ ಕೇಳಿದೆ :

"ಎಲ್ಲಿಗೆ ಹೊರಟಿದೆ ಈ ಮೆರೆವಣಿಗೆ?"

"ಜೋಡುತೀರ್ಥಕ್ಕೆ."

"ಅಲ್ಲಿಗೇಕೆ?"

"ಕಲ್ಯಾಣಜಲ ತರುವುದಕ್ಕೆ."

"ಪಟ್ಟಾಭಿಷೇಕವೇನು?"

"ಅಲ್ಲ; ಕಲ್ಯಾಣಮಹೋತ್ಸವ."

"ಯಾರದು?"

"ದೊಡ್ಡ ಮಹಾರಾಜರದು."

" ಅಂದರೆ.... ? ಮತ್ತೊಬ್ಬ...." ಎಂದು ಅನುಮಾನಿಸಿ ಮುಂದಿನ ಮಾತನ್ನು ತಡೆದೆ.

ದ್ವಾರಪಾಲಕ ಒಮ್ಮೆಲೆ ನನ್ನನ್ನು ದಿಟ್ಟಿಸಿ ನೋಡಿದ. ನನ್ನನ್ನು ಸುಟ್ಟು ಬಿಡುವಷ್ಟು ಕೆಂಡದಂತಾಗಿದ್ದವು ಅವನ ಕಣ್ಣು. " ಇದು ಯಾರ ರಾಜ್ಯ ಗೊತ್ತಿಲ್ಲವೇ ನಿಮಗೆ? ಹೀಗೆ ಕೇಳುವದೂ ಪ್ರಮಾದವಾಗುತ್ತದೆ ಇಲ್ಲಿ!" ಎಂದು ಕಣ್ಣು ಇನ್ನಷ್ಟು ಅಗಲುಮಾಡಿದ.

"ನನಗೆ ತಿಳಿಯದೆ ಕೇಳಿದೆ. ಮನ್ನಿಸಿ. ಕಲ್ಯಾಣಮಹೋತ್ಸವ ಎಂದರೆ ನನಗೆ ಬೇರೆ ಅರ್ಥವಾಯಿತು. ಏನು ಹಾಗೆಂದರೆ?" ಎಂದು ಪ್ರಸಂಗವನ್ನು ವಿಕೋಪಕ್ಕೆ ಹೋಗಗೊಡಬಾರದೆಂದು ಮೆತ್ತಗಾಗಿ ಮಾತನಾಡಿದೆ.

ದ್ವಾರಪಾಲಕ ಸಂತೋಷದಿಂದ ಉಬ್ಬಿ ಮಾತು ಬಿಚ್ಚಿದ:

" ಈ ಕಲ್ಯಾಣಮಹೊತ್ಸವ ಈಗಿದ್ದ ನಮ್ಮ ಮಹಾರಾಜರ ತಂದೆ ಯವರದು. ಈ ಮಹಾರಾಜರು ಇನ್ನೂ ಕೂಸಿದ್ದಾಗ ಅವರು ಈ ರಾಜ್ಯ ಬಿಟ್ಟು ಒಂದು ರಾತ್ರಿ ಹೊರಟುಹೋಗಿಬಿಟ್ಟರು. ಯಾರು ಹೇಳಿದರೂ ಕೇಳ ಲಿಲ್ಲ. ಅದೇನೋ ' ಅಗ್ನಿ ತರತೇನೆ ಮಾನವಕಲ್ಯಾಣಕ್ಕೆ ' ಎಂದು ಹೇಳಿ ಹೋದರಂತೆ. ಹೋದವರು ಇನ್ನೂ ಬಂದಿಲ್ಲ. 'ಎಲ್ಲಿಯೇ ಇರಲಿ—( ಇದ್ದಾ ರೆಂದೇ ತಿಳಿದಿದ್ದಾರೆ)— ಇದ್ದಲ್ಲಿ ನಮ್ಮಪ್ಪಗೆ ಕಲ್ಯಾಣವಾಗಲಿ! ಬೇಗ ತಿರುಗಿ ಬರಲಿ!' ಎಂದು ಅವರು ಬಿಟ್ಟುಹೋದ ಗುರುತು ಇಟ್ಟು ಪೂಜೆಮಾಡಿ ಈ ಉತ್ಸವ ಮಾಡತಾರೆ ನಮ್ಮ ಚಿಕ್ಕಮಹಾರಾಜರು. ಇವತ್ತೇ ಅವರು ಹೊರಟು ಹೋದ ದಿನವಂತೆ. ಅಕಾ, ತಿರುಗಿ ಬಂತು ಮೆರೆವಣಿಗೆ. ಹೋಗುವದಿದ್ದರೆ ಒಳಗೆ ಹೋಗಬಹುದು. ಇಲ್ಲದಿದ್ದರೆ ಅತ್ತ ಸರಿದು ನಿಲ್ಲರಿ." ಎಂದು ಹೇಳಿ ಅತ್ತಕಡೆಗೆ ಹೋದನು.

ನಾನು ಒಳಗೆ ಹೋಗದೆ ಅಲ್ಲಿಯೆ ಒತ್ತಟ್ಟಿಗೆ ಸರಿದು ನಿಂತೆ.

ಮೆರೆವಣಿಗೆ ಜೋಡುತೀರ್ಥದಿಂದ ತಿರುಗಿ ಒಳಕ್ಕೆ ಹೋಯಿತು.

ಮೆರೆವಣಿಗೆಯ ಹಿಂದೆಯೆ ನಾನೂ ಹೊರಟೆ.

ಮೆರೆವಣಿಗೆ ಅರಮನೆಯ ಕಡೆಗೆ ಸಾಗಿತು. ಅದು ರಾಜಮಾರ್ಗದಲ್ಲಿ ಹೊರಟಾಗ ಅಂತಸ್ತುಗಳ ಮೇಲಿಂದ ಹೂಗಳು ಮಳೆಗರೆದಂತೆ ಸುರಿಯು ತ್ತಿದ್ದವು. ಜಯಜಯಕಾರವು ಮೈಗೆ ಮುಳ್ಳು ತರಿಸುತ್ತಿತ್ತು. ಜನಸ್ತೋಮ

ವನ್ನು ನೋಡಿಯಂತೂ ಮನಸ್ಸು ದಿಗಿಲುಗೊಂಡಿತು.

ತಳಿರು-ತೋರಣಗಳಿಂದ ಅಲಂಕೃತವಾದ ಬೀದಿಗಳಲ್ಲಿ ಮೆರೆವಣಿಗೆ ಸಾಗಿತ್ತು. ಒಂದು ಕಡೆಗೆ ಮಹಾಸರ್ಪವೊಂದು ಬಾಯಿ ತೆರೆದಂತೆ ದ್ವಾರ ಕಟ್ಟಿದ್ದರು. ಇನ್ನೊಂದು ಕಡೆಗೆ ಸಿಂಹ ಬಾಯಿ ತೆರೆದಂತೆ ದ್ವಾರ ಕಟ್ಟಿದ್ದರು. ಮೆರೆವಣಿಗೆ ಈ ಬಾಯಿಗಳಲ್ಲಿ ಹಾಯ್ದು ಮುಂದೆ ಸಾಗಿತು.

ಅರಮನೆಯ ಎದುರಿಗಿನ ಪಟಾಂಗಣಕ್ಕೆ ಮೆರೆವಣಿಗೆ ಮುಟ್ಟುವ ಹೊತ್ತಿಗೆ ಸೂರ್ಯ ನಡುನೆತ್ತಿಗೆ ಬಂದಿದ್ದ. ಪಟಾಂಗಣದಲ್ಲಿ ಬಂದ ನಂತರ ಮೆರೆವಣಿಗೆಯ ಸ್ವರೂಪ ಬದಲಾಯಿತು. ರಾಜ, ರಾಜಪರಿವಾರದವರು ಅರಮನೆಯಲ್ಲಿ ಹೊಕ್ಕರು. ಜನಸಮೂಹ ಒಂದು ಕ್ರಮದಲ್ಲಿ ಅಲ್ಲಿಯೆ ಕೂತುಕೊಂಡಿತು.

ಕವಾಯಿತು ನಡೆಯಿತು. ಕುದುರೆ ಓಡಿಸುವುದಾಯಿತು. ಗುರಿ ಹೊಡೆಯುವುದಾಯಿತು. ಶಕ್ತಿಪ್ರದರ್ಶನದ ಚಮತ್ಕಾರಗಳೂ ನಡೆದವು.

ಅಷ್ಟೊತ್ತಿಗೆ ಸೈನ್ಯಾಧಿಕಾರಿಯು ಬಂದು ಸಂಜ್ಞೆಮಾಡಿದ. ಮಂಗಲ ವಾದ್ಯಗಳು ಪ್ರಾರಂಭವಾದವು. ಮಹಾರಾಜರು ದಯಮಾಡಿಸಿದರೆಂದು ಜನ ಕಣ್ಣು ಬಾಯಿಬಿಡುತ್ತ ಎದ್ದುನಿಂತಿತು.

ಎಲ್ಲ ಸ್ತಬ್ಧವಾಯಿತು. ಮಹಾರಾಜರು ತಲೆಯ ಮೇಲೆ ಏನನ್ನೊ ಹೊತ್ತುಕೊಂಡು ಬಂದರು. ಪ್ರಚಂಡ ಸೈನ್ಯವೆಲ್ಲ ಒಮ್ಮೆಗೇ ಒಂದೇ ನಿಮಿಷಕ್ಕೆ ರಾಜಮರ್ಯಾದೆ ಕೊಟ್ಟಿತು. ಮಹಾರಾಜರು ತಲೆಬಾಗಿಸಿ ಅದನ್ನು ಸ್ವೀಕರಿಸಿದರು.

ಮತ್ತೆ ವಾದ್ಯಗಳು ಮೊಳಗಿದವು. ಮಹಾರಾಜರು ತಲೆಯಮೇಲಿದ್ದ ಪಾದರಕ್ಷೆಗಳನ್ನು ಸಿಂಹಾಸನದ ಮೇಲೆ ಇರಿಸಿದರು. ಅವಕ್ಕೆ ನಮಸ್ಕರಿಸಿದರು. ಹೂಮಾಲೆ ಅರ್ಪಿಸಿದರು. ಜನ ಜಯಜಯಕಾರ ಮಾಡಿತು. ಆ ಧ್ವನಿ ನನ್ನ ಎದೆಯನ್ನೂ ಹೊಕ್ಕು ನನ್ನನ್ನು ನಡುಗಿಸಿತು. ಒಂದು ಕ್ಷಣ ಪರವಶನಾಗಿ ಕಣ್ಣುಮುಚ್ಚಿದೆ. ಮುಂದೆ ಏನೇನು ನಡೆಯಿತೊ ಕಾಣಿಸಲಿಲ್ಲ.

ತಿರುಗಿ ಕಣ್ಣುತೆರೆದಾಗ ಜನ ಎಲ್ಲಾ ಹೊರಟುಹೋಗಿತ್ತು. ಇರುವೆಗೂ ಸಹ ಓಡಾಡಲು ಬರದಂತೆ ತುಂಬಿದ ಆ ವಿಸ್ತಾರವಾದ ಪಟಾಂಗಣ ಈಗ

ನಿರ್ಜನವಾಗಿತ್ತು. ಅಲ್ಲಲ್ಲಿ ಅರಮನೆಯ ರಕ್ಷಕರು ತಮ್ಮ ಪಾಳಿ ಮಾಡು ತ್ತಿದ್ದರು. ರಾಜಪರಿವಾರವೆಲ್ಲ ಅರಮನೆ ಸೇರಿತ್ತು.

ಎತ್ತ ಹೋಗುವದಕ್ಕೂ ತಿಳಿಯದೆ ನಾನೊಬ್ಬನೇ ಇನ್ನೂ ಅಲ್ಲಿಯೆ ನಿಂತಿದ್ದೆ. ಮನಸ್ಸು ವಿಸ್ಮಯಲೋಕದಲ್ಲಿಯೆ ಇನ್ನೂ ಹರಿದಾಡುತ್ತಿತ್ತು.

ನನ್ನನ್ನು ನಾನೇ ಒಮ್ಮೆ ನೋಡಿಕೊಂಡೆ. 'ನಾನೇ ಆ ಮಹಾರಾಜ' ಎಂದು ಬಾಯಿಬಿಟ್ಟು ಹೇಳಿದರೂ ಯಾರೂ ನಂಬುವಂತಿರಲಿಲ್ಲ. ಗುರುತು ನಾನೂ ಕೊಟ್ಟಿರಲಿಲ್ಲ; ಅವರೂ ಇಟ್ಟಿರಲಿಲ್ಲ. ಗುರುತು ಹಿಡಿಯಬಹುದಾದ ತಾಯಿ ಕುರುಡಾಗಿದ್ದಾಳೆ; ಹೆಂಡತಿ ಶಕ್ತಿಹೀನಳಾಗಿದ್ದಾಳೆ; ಬೇಡ, ಬೇಡ, ಈ ರಾಜಭೋಗವೇ ಬೇಡ. ಅದು ನನ್ನನ್ನು ಕೆಳಕ್ಕೆ ಒಯ್ಯಬಹುದೆಂದೇ ದೈವ ಈ ನಾಟಕ ಹೂಡಿರಬಹುದು. ಇನ್ನು ಹೆಚ್ಚಿಗೆ ಇಲ್ಲಿ ನಿಲ್ಲುವುದು ವಿಹಿತವಲ್ಲ. ಇದು ಸಾಕು, ಸಾಕು. ಎಂದುಕೊಂಡು ಅಲ್ಲಿಂದ ಕಾಲು ಕಿತ್ತಿದೆ. ಹೊರಡುವಾಗ ಅರಮನೆಯ ಕಡೆಗೆ 'ಇದೇ ಕೊನೆಯ ಸಲ ನೋಡುವುದು' ಎಂಬ ಅಗಲಿಕೆಯ ನೋವು ತುಂಬಿದ ಕಣ್ಣಿನಿಂಧ ಒಮ್ಮೆ ನೋಡಿದೆ. ಒಂದೆರಡು ಹನಿ ಕಣ್ಣಿಂದ ಹೊರಬಂದು ಗಲ್ಲದ ಮೇಲೆಯೆ ನಿಂತವು. ಮುಖ ಹೊರಳಿಸಿ ರಾಜಮಾರ್ಗ ಹಿಡಿದು ಹೊರಟುಬಿಟ್ಟೆ. ನನ್ನ ಹತ್ತಿರ ನನ್ನ ಪಾಡಿತ್ತು.

ಎಲ್ಲೆಲ್ಲಿಯೊ ಅಲೆದಾಡಿ ಕೊನೆಗೆ ಜೋಡುತೀರ್ಥಕ್ಕೇ ಬಂದೆ. ಇಳಿದು ಹೋಗಿ ನೀರು ಕುಡಿದು ಬಂದು ಆಲದಮರದ ಬಡ್ಡೆಗೆ ಆತುಕೊಂಡು ಕುಳಿತೆ. ನನ್ನ ಪಾಡನ್ನು ನಾನೇ ಸವಿದೆ. ಮುದುಕ ಕೊಟ್ಟಿದ್ದ ದರ್ಶನ-ದ್ರವ್ಯ ಕಣ್ಣಿಗೆ ಹಚ್ಚಿಕೊಳ್ಳಬೇಕೆಂದೆ. ಆದರೆ ಆತ ಕೊಟ್ಟ ಎಚ್ಚರಿಕೆ ನೆನಪಾಗಿ ಒಂದು ಕ್ಷಣ ಹಿಂಜರಿದೆ. ಮರುಕ್ಷಣದಲ್ಲಿಯೆ ದರ್ಶನಕ್ಕಾಗಿ ಹಾತೊರೆಯುತ್ತಿದ್ದ ನನ್ನ ಮನಸ್ಸು ನನ್ನನ್ನು ಸುಮ್ಮನೆ ಕೂಡಗೊಡಲಿಲ್ಲ. ಇದೇ ಕೊನೆಯ ದರ್ಶನ ಎಂದರಿತೂ ಅದನ್ನು ತೆಗೆದು ಕಣ್ಣಿಗೆ ಹಚ್ಚಿಕೊಂಡೆ. ಕೂಡಲೆ ಎದುರಿಗಿದ್ದ ಸೃಷ್ಟಿಯೆಲ್ಲ ಮರೆಯಾಗಿ ಹೊಸ ಸೃಷ್ಟಿಯೆ ಕಾಣಿಸಿಕೊಂಡಿತು.

## ವೇದದರ್ಶನ

ಒಂದು ಅತಿ ವಿಸ್ತಾರವಾದ ಬಯಲು. ಬಯಲ ಅಂಚಿಗೆ ಗುಡ್ಡಗಳ ಸಾಲು. ಬಯಲಲ್ಲಿ ಅಸಂಖ್ಯ ಜನರ ಗುಂಪೊಂದು ಇರಿವೆಯ ಸಾಲಿನಂತೆ ಸಾಲಾಗಿ ಆ ಗುಡ್ಡಗಳತ್ತ ಸಾಗಿತ್ತು.. ಆ ಸಾಲಿನಲ್ಲಿ ನಾನೂ ಒಬ್ಬನಿದ್ದೆ. ಪ್ರತಿಯೊಬ್ಬರ ಕೈಯ್ಯಲ್ಲಿಯೂ ದೇಶದ ಆದರ್ಶವನ್ನು ತೋರಿಸುವ ಒಂದು ಸಂಕೇತವಿತ್ತು. ಎಲ್ಲರೂ ಆ ಆದರ್ಶಕ್ಕೆ ಮಾರುಹೋಗಿದ್ದರು. ಅದಕ್ಕಾಗಿ ಅವರೆಲ್ಲ ಮನೆ ನೀಗಿ ಬಂದಿದ್ದರು; ಮೈ ನೀಡ ಬಂದಿದ್ದರು; ಮನ ತಾಗಿ ಬಂದಿದ್ದರು. ಈ ವರೆಗೂ ಪರದಾಸ್ಯದಲ್ಲಿದ್ದು ಈಗ ಅದರಿಂದ ಸ್ವತಂತ್ರರಾಗಲು ಎದ್ದು ತಲೆಯೆತ್ತಿ ನಿಂತಿದ್ದರು. ಆ ಹುಮ್ಮಸ ಆ ಧೈರ್ಯ ಆ ಉತ್ಸಾಹದಿಂದಲೇ ಈ ಹಾದಿ ಹಿಡಿದು ನಡೆದಿದ್ದರು.

ನನ್ನಲ್ಲಿ ಮಾತ್ರ ಯಾವುದೂ ಇರಲಿಲ್ಲ. ನಾನು ಆ ಸಾಲಿನಲ್ಲಿ ಹೇಗೆ ಬಂದು ಕೂಡಿಕೊಂಡಿದ್ದೇನೊ ನನಗೇ ತಿಳಿಯದು. ಕೆಲದಾರಿ ತುಳಿದ ಮೇಲೆ ನನಗೆ ಬೇಸರ ಬಂತು. ಆ ಆದರ್ಶವೂ ಮಸುಕಾಗಹತ್ತಿತು. ಇದು ನನ್ನ ಮಾರ್ಗವಲ್ಲ ಎಂದು ಒಳಗೆನಿಸಹತ್ತಿತು. ಹೇಗಾದರೂ ಮಾಡಿ ಅದರೊಳಗಿಂದ ತಪ್ಪಿಸಿ ಬರಬೇಕೆಂದು ನಿಶ್ಚಯಿಸಿದೆ. ಆ ಸಾಲಿನೊಳಗಿಂದ ಮೆಲ್ಲಗೆ ಹೊರಬಿದ್ದು ಹಿಂದೆ ಸರಿದೆ. ನಾನು ಹಿಂದುಳಿಯುವುದನ್ನು ನೋಡಿ ಕೆಲರು 'ಹೇಡಿ' ಎಂದರು; ಕೆಲರು 'ಜೀವಗಳ್ಳ' ಎಂದರು. ನಾನು ಅದಾವುದಕ್ಕೂ ಲಕ್ಷ್ಯ ಕೊಡಲಿಲ್ಲ. ನನ್ನ ಒಳಗಿನ ಎಳೆತ ಸೆಳೆದತ್ತ ಹೊರಟೆ.

ಒಂದು ಅಡವಿಯನ್ನು ಸೇರಿದೆ. ಹಚ್ಚಹಸಿರು ಹುಲ್ಲು ಎಲ್ಲೆಲ್ಲಿಯೂ ಬೆಳೆದಿತ್ತು. ಒಂದು ಆಕಳಕರು ಅದರಲ್ಲಿ ನಿರ್ಭಯವಾಗಿ ಮೇಯುತ್ತ ನಿಂತಿತ್ತು. ನೋಡಿ ಮುದ್ದು ಬಂತು. ಹತ್ತಿರಕ್ಕೆ ಹೋಗಿ ಮೈಮೇಲೆ ಕೈಯಾಡಿಸಿ ಮುಖಕ್ಕೆ ಮುದ್ದಿಟ್ಟೆ. ಸುಮ್ಮನಿತ್ತು. ಪ್ರೀತಿ ಹೆಚ್ಚಾಗಿ ಎತ್ತಿಕೊಂಡೆ. ಹಾಗೇ ಮುಂದಕ್ಕೆ ಸಾಗಿದೆ. ಎಷ್ಟೋ ಹೊತ್ತು ನಡೆದ

ನಂತರ ದಣಿವೆನಿಸಿತು. ನೀರಡಿಕೆಯೂ ಹೆಚ್ಚಾಯಿತು. ಕರುವನ್ನು ಅಲ್ಲಿಯೆ ಇಳಿಸಿ, ಹತ್ತಿರದಲ್ಲಿಯೆ ಹರಿಯುತ್ತಿದ್ದ ಒಂದು ಹಳ್ಳಕ್ಕೆ ಹೋದೆ. ಕೈಕಾಲು ತೊಳೆದುಕೊಂಡು ನೀರು ಕುಡಿದೆ. ಆ ಶುಭ್ರಜಲ ನೋಡಿ ಈಸಬೇಕೆನಿಸಿತು. ಮೇಲೆ ಬಂದು ಮೈಮೇಲಿನ ಅರಿವೆ ತೆಗೆದಿಟ್ಟು ನೀರಲ್ಲಿಳಿದು ಇನ್ನು ಸಾಗರಬೀಳುವವನು; ಅಷ್ಟರಲ್ಲಿ ಯಾರೋ ಕೂಗಿದಂತಾಯಿತು. ಹಿಂತಿರುಗಿ ನೋಡಿದೆ. ಯಾರೋ ಹೆಣ್ಣುಮಕ್ಕಳು ಅತ್ತ ಕಡೆ ಒಗೆಯುತ್ತಿದ್ದುದು ಕಂಡಿತು. ಮತ್ತಾರನ್ನಾದರೂ ಕೂಗಿರಬಹುದೆಂದು ತಿಳಿದು ಈಸುಬಿದ್ದೆ. ಮಧ್ಯದಲ್ಲಿದ್ದ ಒಂದು ಕಲ್ಲುಮಂಟಪದ ವರೆಗೂ ಈಸಿ ಹೋದೆ. ಮಂಟಪ ಹತ್ತಿ ನೋಡಿದೆ. ಈಶ್ವರ ಇತ್ತು. ಕೈಮುಗಿದೆ. ಅಷ್ಟರಲ್ಲಿ ಒಂದು ದನಗಾಹಿ ಹುಡುಗ ಆ ದಂಡೆಗೆ ನಿಂತು "ಏನ್ರೀ ದೇವರೂ! ಹಾಳಾದಿರಿ ತೆಗೀರಿ! ಇನ್ನ ನೀವು ಅತ್ತಾಕs ಬಿಡ್ರಿ! ಇದು ಮೊಸಳೀ ಊರು. ನಿಮ್ಮನ್ನ ತಿಂದಬಿಡತಾವರೀ! ಇದನೇನು ಮಾಡಿದಿರಿಯಪ್ಪಾ! ಆತು, ಅಲ್ಲೇ ಕುಂದರ್ರಿ, ನಾ ಊರಾಕ ಹೋಗಿ ನಮ್ಮಪ್ಪನ್ನ ಕರಕೊಂಡು ಬರೋಮುಟ. ಮತ್ತ ಇತ್ತಾಕ ಬರಾಕ ಹೋಗಬ್ಯಾಡ್ರಿ! ನುಂಗೇಬಿಡತಾವು!" ಎಂದು ಒದರಿ ಹೇಳಿ ಓಡಿಯೇ ಹೋದ. ಏನು ಮಾಡಬೇಕೆಂಬುದು ತಿಳಿಯದಂತಾಯಿತು. ಧೈರ್ಯ ತಂದುಕೊಂಡು ಅಲ್ಲಿಯೆ ನಿಂತೆ. ನಾನು ಎತ್ತಿಕೊಂಡು ತಂದ ಆ ಕರು ಆಚೆಯ ದಂಡೆಯ ಮೇಲೆ ಹಸುರನ್ನು ಮೇಯುತ್ತ ಅಲ್ಲಿಯೆ ನಿಂತಿತ್ತು. ನಡುನಡುವೆ ನನ್ನನ್ನು ನೋಡುತ್ತಿತ್ತು. ಇಷ್ಟರಲ್ಲಿ ಒಂದು ವಿಚಿತ್ರ ಆಕಾರವು ನೀರೊಳಗಿಂದ ಎದ್ದು ನನ್ನೆದುರಿಗೆ ನಿಂತಿತು. ಆಕಾರ ಅರ್ಧ ಮನುಷ್ಯನದು ಅರ್ಧ ಮೊಸಳೆಯದು.

"ಇದು ನಮ್ಮ ರಾಜ್ಯ. ಬರುವ ಮೊದಲು ಕೇಳಿ ಬಂದಿರಾ?"

"ಕೇಳುವುದಕ್ಕೆ ಇಲ್ಲಿ ಯಾರೂ ಕಾಣಿಸಲಿಲ್ಲ."

"ಕಂಡಿದ್ದರೂ ಕೇಳಬಹುದಿತ್ತೇ?"

"ಏನೊ ಹೇಳಲಾರೆ."

"ಸರಿ. ನಾವು ನಿಮ್ಮನ್ನು ಬಿಡುವುದಿಲ್ಲ. ಇಲ್ಲಿಯ ರಾಜಶಾಸನ

ವಿೂರಿ ನೀವು ಒಳಗೆ ಬಂದಿರುತ್ತೀರಿ. ಅದಕ್ಕೆ ನೀವು ಪ್ರಾಣದಂಡ ಕೊಡ ಬೇಕಾಗುವುದು. ಇಲ್ಲವಾದರೆ ಆ ಕರುವನ್ನು ನಮಗೆ ಒಪ್ಪಿಸಬೇಕು. ಯಾವುದು ಮಾಡುತ್ತೀರಿ ?"

"ನಾ....ನೆ....!" ಎಂದು ಕಣ್ಣು ಮುಚ್ಚಿ ನೀರಲ್ಲಿ ಹಾರಲು ಸಿದ್ಧನಾದೆ.

"ಇರಲಿ ಹೋಗು. ಇದೊಂದು ಸಲ ಬಿಟ್ಟದ್ದೇವೆ: ಪೂರ್ವದಿಕ್ಕಿಗೆ ಹೋಗು. ಅಲ್ಲಿ ಇನ್ನೊಮ್ಮೆ ಕಾಣಿಸಿಕೊಳ್ಳುತ್ತೇನೆ." ಎಂದುಸುರಿ ನೀರಲ್ಲಿ ಮುಳುಗಿ ಕಾಣದಾಯಿತು.

ಈಸಿ ಆ ದಂಡೆಗೆ ಹೋದೆ. ದನಗಾಹಿ ಹುಡುಗ ಕರೆದು ತಂದ ಜನರು ನಾನು ಇತ್ತ ಬಂದಿದ್ದನ್ನು ನೋಡಿ ಬೆರಗುಪಟ್ಟರು. ಅವರಿಗೆ ನಾನೊಬ್ಬ ಮಹಾಪುರುಷನಾಗಿ ತೋರಿದೆ. ಹಾಗೆ ತಿಳಿದೆ ನಮಸ್ಕರಿಸಿದರು. ಊರಿಗೆ ಬರಲು ಬಿನ್ನವಿಸಿಕೊಂಡರು. ನಾನು ಅವರ ಮಾತಿಗೆ ಒಪ್ಪದೆ ಕರುವನ್ನು ಎತ್ತಿಕೊಂಡು ಪೂರ್ವದಿಕ್ಕಿಗೆ ಹೊರಟೆ.

ಎಷ್ಟೋ ಹೊತ್ತು ನಡೆದ ಮೇಲೆ ಒಂದು ಹಳೆಯ ಗುಡಿ ಕಾಣಿಸಿಕೊಂಡಿತು. ಅದರಲ್ಲಿ ಹೊಕ್ಕು ನೋಡಿದೆ, ಆ ಮೊಸಳೆ ಹೇಳಿದ ಜಾಗ ಇದೇ ಇರಬಹುದೇ ಎಂದುಕೊಂಡು. ಏನೂ ಕಾಣಿಸಲಿಲ್ಲ. ಹೊರಗೆ ಬಂದು ಒಂದು ಮಂಟಪ ದಲ್ಲಿ ಕುಳಿತಾಗ ಒಂದು ಮೂಲೆಯ ಕಡೆಗೆ ದೃಷ್ಟಿ ಹೋಯಿತು. ಎದ್ದು ಹೋಗಿ ನೋಡಿದೆ. ಒಂದು ಗ್ರಂಥದ ಹಳೆಯ ಗಂಟು ಇತ್ತು. ತೆಗೆದುಕೊಂಡು ಬಿಚ್ಚಿ ನೋಡಿದೆ. ಅದರಲ್ಲಿ ನಾಲ್ಕು ಸಣ್ಣ ಗಂಟುಗಳಿದ್ದವು. ಮೊದಲನೆ ಯದರ ಮೇಲೆ 'अथर्वण संहिता' ಎಂದು ಬರೆದಿತ್ತು. ತೆರೆದು ನೋಡಿದೆ. ಅನಂತ ಚಿತ್ರಗಳಿದ್ದವು. ಜಗತ್ತಿನಲ್ಲಿಯ ಎಲ್ಲ ಪದಾರ್ಥಗಳ ಚಿತ್ರಗಳೂ ಅದ ರಲ್ಲಿದ್ದವು. ಎರಡನೆಯದನ್ನು ಬಿಚ್ಚಿ ನೋಡಲಾಗಿ ಅದರ ಮೇಲೆ 'ऋग्वेद संहिता' ಎಂದು ಬರೆದಿತ್ತು. ತೆರೆದು ನೋಡಿದೆ. ಇದೇ ಹೊತ್ತಿಗೆ "ಗೊತ್ತಾ ಯಿತೇ ?" ಎಂದು ಯಾರೋ ಕೇಳಿದಂತಾಯಿತು. ಹಿಂತಿರುಗಿ ನೋಡಿದೆ. ಒಂದು ಸುಂದರ ಮೂರ್ತಿ ನನ್ನ ತಲೆಯ ಮೇಲೆ ಕೈಯಿಟ್ಟು ನಿಂತುಕೊಂಡಿತ್ತು. ತಲೆ ತಾನಾಗಿಯೆ ಬಾಗಿತು. ಬಾಗಿದಾಗಲೆ ಆ ಮೂರ್ತಿ ನನ್ನನ್ನು ತನ್ನೆಡೆಗೆ ಸೆಳೆದುಕೊಂಡಿತು.

(೨೦-೨-೧೯೨೯)

## ಕಮಲಪ್ರವಾಹ

ಪಶ್ಚಿಮ ದಿಗಂತದಲ್ಲಿ ಶ್ಯಾಮವರ್ಣಮೇಘಗಳ ಮರೆಯೊಳಗಿಂದ ಸಂಧ್ಯಾಸೂರ್ಯನ ಹೊಂಬೆಳಕು ಹರಿದುಬರುತ್ತಿರುವಂತೆ ಕಂಡಿತು. ಆ ಬೆಳಕಿನ ಪ್ರವಾಹ ಎರಡೂ ದಂಡೆ ತುಂಬಿ ಸೂಸಿ ಹರಿಯುವ ಮಳೆಗಾಲದ ಹೊಳೆಯಂತೆ ರಭಸದಿಂದ ಸಾಗಿತ್ತು. ಪ್ರವಾಹ ಕಾಣಿಸದಂತೆ ಅದರ ತುಂಬೆಲ್ಲ ಕಮಲಗಳು ಅರಳಿ ನಿಂತಿದ್ದವು. ಕಮಲಪ್ರವಾಹವೆ ಹರಿದು ಸಾಗುತ್ತಿರುವಂತೆ ಕಂಡಿತು. ಈ ಪ್ರವಾಹ ಒಂದು ಅತ್ಯಂತ ಸುಂದರ ಜಲಮಂಟಪವನ್ನು ಸುತ್ತಿಕೊಂಡು ಮುಂದೆ ಸಾಗಿತ್ತು. ಆ ಜಲಮಂಟಪದಲ್ಲಿ ತರುಣ ತರುಣಿ ಯರಿಬ್ಬರು ಪ್ರವಾಹದಲ್ಲಿ ಕಾಲಿಳಿಬಿಟ್ಟು ಕುಳಿತು, ತಮ್ಮ ಕಾಲುಗಳನ್ನು ಮುಟ್ಟಿ ಮುಟ್ಟಿ ಮುಂದೆ ಹರಿದುಹೋಗುತ್ತಿದ್ದ ಆ ಅರಳಿದ ಕಮಲಗಳನ್ನೆಲ್ಲ ಲೀಲೆಯಿಂದ ನೋಡುತ್ತ ಕುಳಿತಿದ್ದರು. ಪ್ರತಿಯೊಂದು ಕಮಲವೂ ಅವರ ಪಾದದ ಹತ್ತಿರ ಬಂದೊಡನೆ ‘ ನನ್ನನ್ನು ಎತ್ತುವರೇ ’ ಎಂಬ ಆಶೆಯಿಂದ ಮುಖವರಳಿಸಿ ನೋಡಿ ನೋಡಿ ಮುಂದೆ ಸಾಗುತ್ತಿತ್ತು. ತರುಣಿ ಕೈಮಾಡಿ ತೋರಿಸಿದ ಕಮಲವನ್ನು ತರುಣ ಪ್ರವಾಹದಿಂದ ಎತ್ತಿ ಅವಳಿಗೆ ಮುಡಿಸು ತ್ತಿದ್ದ; ಅವಳ ಕೈಯಲ್ಲಿ ಕೊಡುತ್ತಿದ್ದ.

ಹೀಗೆ ಅವರ ಲೀಲೆ ನಡೆದಿತ್ತು. ನಾನೂ ಆ ಪ್ರವಾಹದಲ್ಲಿಯ ಒಂದು ಕಮಲವಾಗಿದ್ದೆ. ತೇಲುತ್ತ ಅವರ ಪಾದದ ಹತ್ತಿರ ಬಂದೆ. ಮುಖ ಅರಳಿಸಿ ಮೇಲಕ್ಕೆತ್ತಿದೆ. ತರುಣ ತರುಣಿಯ ಮುಖವನ್ನು ನೋಡಿದ. ತರುಣಿ ಹುಬ್ಬು ಹಾರಿಸಿದಳು. ತರುಣ ಕೈಯಿಟ್ಟು ನನ್ನನ್ನು ಪ್ರವಾಹದಿಂದೆತ್ತಿ ಅವಳ ಕೈಗೆ ಕೊಟ್ಟ. ( ೨೧–೫–೧೯೩೧ )

## ದೊಡ್ಡವರ ತೂಗುಕಲ್ಲು

ಎಲ್ಲಾ ಮಾಯವಾಯಿತು. ಸ್ವಚ್ಛವಾದ ಶುಭ್ರ ಅಖಂಡಪ್ರಕಾಶವು ತುಂಬಿಕೊಂಡಿತು. ಅದರಲ್ಲಿ ಸೂರ್ಯನಿರಲಿಲ್ಲ; ಶಬ್ದವಿರಲಿಲ್ಲ. ಗಾಢವಾದ

ಮೌನವೇ ಆ ಪ್ರಕಾಶದ ಒಳಗುಟ್ಟಾಗಿತ್ತು. ಆ ಪ್ರಕಾಶಕ್ಕೆ ಆದಿಯೂ ಇರಲಿಲ್ಲ, ಅಂತವೂ ಇರಲಿಲ್ಲ. "ಮೊದಲು ಜಗತ್ತು ಹೀಗೇ ಇತ್ತು." ಎಂಬ ಶಬ್ದ ಕೇಳಿಸಿತು.

ಅಲ್ಲಿಂದ ಆ ಅಖಂಡಪ್ರಕಾಶವು ಕಡಿಮೆಯಾಗುತ್ತ ಕಡಿಮೆಯಾಗತ್ತ, ಕೊನೆಗೆ ಒಂದು ಬಿಂದುರೂಪವಾಗಿ ನಿಂತುಬಿಟ್ಟಿತು. ಆ ಬಿಂದುವಿನಿಂದ ಪ್ರಕಾಶದ ಎಳೆಗಳು ಒಂದೊಂದಾಗಿ ಹೊರಬಿದ್ದು ಅನಂತದ ವರೆಗೆ ಹಬ್ಬಿದವು. ಮತ್ತೆ ಮೊದಲಿನಂತೆ ಎಲ್ಲ ಕಡೆಗೂ ಪ್ರಕಾಶಮಯವಾಯಿತು. ಆದರೆ ಮೊದಲಿನ ಪ್ರಕಾಶದ ಶುಭ್ರತೆ ಈ ಪ್ರಕಾಶಕ್ಕಿರಲಿಲ್ಲ. ಇದು 'ಎಳೆ ಎಳೆ'ಯಾಗಿತ್ತು. ಆತ್ಮವನ್ನು ತಣಿಸುವ ಶಕ್ತಿಯು ಇದಕ್ಕಿರಲಿಲ್ಲ. ಇದರಲ್ಲಿ ಮೋಹಕತೆ ಹೆಚ್ಚಿತ್ತು.

ಅಲ್ಲಿಂದ ಎಳೆಎಳೆಯಾಗಿ ಹಬ್ಬಿದ್ದ ಆ ಪ್ರಕಾಶವು ಕಡಿಮೆಯಾಗುತ್ತ ಬಂದು ಒಂದೇ ಎಳೆಯಾಗಿ ಎರಡು ಬಿಂದುಗಳ ನಿರ್ಮಾಣವಾಯಿತು. ಈ ಎರಡು ಬಿಂದುಗಳ ನಡುವೆ ಮೊದಲಿನ ಪ್ರಕಾಶವೆಲ್ಲ ಹರಿಯಹತ್ತಿತು. ಈಗ ಶಬ್ದ ಕೇಳಿಸಿತು. ಪ್ರಕಾಶದ ಗುಂಟ ನೋಡಿದರೆ ಎರಡನೆಯ ಬಿಂದುವಿನಲ್ಲಿ ಒಂದು ಚಿಕ್ಕ ಸುಂದರ ಮೂರ್ತಿಯು ಕಾಣಿಸಿಕೊಂಡಿತು. ಅದು ಮೊದಲಿನ ಬಿಂದುವಿನಿಂದ ಹರಿದು ಬರುತ್ತಿರುವ ಪ್ರಕಾಶವನ್ನೆ ಕುಡಿಯುತ್ತಿರುವಂತೆ ಕಂಡಿತು. ಶಬ್ದ ಅಲ್ಲಿಂದ ಹೊರಡುತ್ತಿತ್ತು.

ಮುಂದೆ ಒಂದು ಕ್ಷಣದಲ್ಲಿ ಆ ಮೂರ್ತಿ ಕಾಣದಂತಾಯಿತು. ಶಬ್ದವೂ ಅಡಗಿತು. ಪ್ರಕಾಶವೂ ಹೋಯಿತು. ಎಲ್ಲ ಕಡೆಗೂ ಕತ್ತಲೆಯು ತುಂಬಿಕೊಂಡಿತು. ಕಗ್ಗತ್ತಲೆ! ಬೆಳಕಿನಲ್ಲಿದ್ದ ಮೌನವು ಬೇಕು, ಆದರೆ ಕತ್ತಲೆಯಲ್ಲಿದ್ದ ಈ ಮೌನ ಮಾತ್ರ ಬೇಡ ಎನಿಸಿತು. ಕತ್ತಲೆಗಂಜಿ ಮತ್ತೆ ಬೆಳಕನ್ನು ಬೇಡಿದೆ.

ಆಕಾಶದಲ್ಲಿ ನಕ್ಷತ್ರ ಮಿಣುಕುವಂತೆ ಆ ಕಗ್ಗತ್ತಲೆಯಲ್ಲಿ ದೂರ ದೂರದಲ್ಲಿ ಒಂದು ಪ್ರಕಾಶಬಿಂದುವು ಕಾಣಿಸಿಕೊಂಡಿತು. ಆತುರದಿಂದ ನೋಡಿದೆ. ಇನ್ನೂ ಬಹುದೂರವಿದೆಯೆಂದೆನಿಸಿ 'ಬೇಗ ಹತ್ತಿರ ಬರಬಾರದೇ ?' ಎಂದೆ. ಪ್ರಕಾಶವು ಸ್ವಲ್ಪ ಸ್ವಲ್ಪ ಮುಂದೆ ಬಂದಂತೆನಿಸಿತು. ಆ ಪ್ರಕಾಶದ ಮಂದ ಬೆಳಕಿನಲ್ಲಿ ನನಗೂ ಅದಕ್ಕೂ ಇದ್ದ ಅಂತರವನ್ನು ಅಸಂಖ್ಯ ಕಮಾನುಗಳು

(Arch) ತುಂಬಿದ್ದವು. ಪ್ರಕಾಶವು ಒಂದೊಂದೇ ಕಮಾನಿನೊಳಗಿಂದ ಹಾಯ್ದು ಬರುತ್ತಿತ್ತು. ಕಣ್ಣೋಟದ ಆಳತೆಯಲ್ಲಿ ಬಂದೊಡನೆ ಆ ಪ್ರಕಾಶವು ಒಬ್ಬ ಮೋಹಿನಿಗೆ ತೊತ್ತಾಗಿ ಮುಂದೆ ಮುಂದೆ ಹಾದಿ ತೋರಿಸುತ್ತ ಬರುತ್ತಿರುವುದೆಂಬದು ತಿಳಿಯಿತು. ಹಾಗೇ ಕಣ್ಣು ಪಿಳುಕಿಸದೆ ನೋಡ ಹತ್ತಿದೆ. ಪ್ರಕಾಶವೂ ಮೋಹಿನಿಯೂ ಹತ್ತಿರ ಹತ್ತಿರ ಬರಹತ್ತಿದ್ದರು. ಪ್ರಕಾಶದ ಪ್ರಖರತೆಯನ್ನು ತಾಳಲಾರದೆ ಕಣ್ಣುಗಳು ಮುಚ್ಚಿ ಮುಚ್ಚಿ ತೆರೆ ಯುತ್ತಿದ್ದವು. ಪ್ರಕಾಶವು ತೀರ ಸಮೀಪಕ್ಕೆ ಬಂದೊಡನೆ ಒಳಗಣ್ಣು ಕುಕ್ಕಿದವು. ಒಂದು ತರದ ವೇದನೆಯಾಗಹತ್ತಿತು. ಆಗ ಬೆಳಕು ತಡೆಯ ಲಾರದೆ ಕತ್ತಲೆಯನ್ನೇ ಬೇಡಿದೆ. ಎಲ್ಲವೂ ಮತ್ತೆ ಕತ್ತಲೆಯಲ್ಲಿ ಕರಗಿ ಹೋಯಿತು.

ಹಾಗೆಯೆ ನಿರ್ವಿಕಾರನಾಗಿ ಕೆಲವೇಳೆ ಕುಳಿತುಕೊಂಡಿದ್ದೆ. ಮನಸ್ಸಿನ ಮೆಟ್ಟಲು ಆಗ ಕೆಳಗಿತ್ತೊ ಮೇಲಿತ್ತೊ ನನಗೆ ತಿಳಿಯದು. ಈ ಅವಸ್ಥೆಯಲ್ಲಿ ನಾನಿರುವಾಗ ತಂಗಾಳಿ ಬೀಸಿದಂತಾಗಿ ನನ್ನ ಮೈಮೇಲಿನ ಕೂದಲುಗಳು ನಿಮಿರಿ ನಿಂತವು. ಬುದ್ಧಿಯು ಜಾಗೃತವಾಯಿತು. ಮನಸ್ಸು ವಿಕಸಿತ ವಾಯಿತು. ಸುವಾಸನೆಯು ಸುತ್ತೆಲ್ಲ ತುಂಬಿಹೋಯಿತು. ಉಲ್ಲಾಸದಿಂದ ಒಳಗಣ್ಣು ತೆರೆದು ಮತ್ತೆ ನೋಡಿದೆ.

ಕತ್ತಲೆಯು ಜಾರುತ್ತಲಿತ್ತು. ಹೊಂಬೆಳಕು ಮೆಲ್ಲಗೆ ತುಂಬುತ್ತಲಿತ್ತು. ಈ ಹೊಂಬೆಳಕ ಪ್ರವಾಹದಲ್ಲಿ ಸಣ್ಣ ದಿಣ್ಣೆಯೊಂದು ತಲೆಯೆತ್ತಿ ಕಾಣ ಹತ್ತಿತು. ಆ ದಿಣ್ಣೆಯ ತುಂಬೆಲ್ಲ ಗಿಡಗಳು; ಆ ಗಿಡಗಳಿಗೆಲ್ಲ ಹೊಳೆಯುವ ಕಪ್ಪುನೀಲಿಯ ಎಲೆಗಳು; ಮತ್ತು ಕೆಂಪು ದೊಡ್ಡ ಹಣ್ಣುಗಳು, ರಮಣೀಯ ವಾಗಿದ್ದವು.

ದಿಣ್ಣೆಯ ಕೆಳಬದಿಗೆ ದೊಡ್ಡದೊಂದು ಬಯಲು. ಅದರ ತುಂಬೆಲ್ಲ ಹಸಿರುಮುರಿಯುವ ಹುಲ್ಲು. ಎತ್ತರವಾದ ಗಿಡಗಳು ಆ ಬಯಲಿಗೆ ಬೇಲಿ ಯಂತೆ ಬೆಳೆದು ನಿಂತಿದ್ದವು. ಗಿಡಗಳಿಗೆ ಹಬ್ಬಿದ ಬಳ್ಳಿಗಳು ಜೋಕಾಲಿ ಯಂತಿದ್ದವು. ಪ್ರತಿಯೊಂದು ಎಲೆಯ ಮೇಲೂ, ಪ್ರತಿಯೊಂದು ಹಣ್ಣಿನ ಮೇಲೂ, ಬೆಳೆದು ನಿಂತ ಪ್ರತಿಯೊಂದು ಹುಲ್ಲುಗರಿಯ ಮೇಲೂ, 'ವಿಶ್ವಾನಂದ' (Universal joy) ಎಂದು ಕಾಣದ ಕೈಯೊಂದು ಕೆತ್ತಿತ್ತು.

ಇದೆಲ್ಲವನ್ನೂ ಆಕಾಶವು ಕನ್ನಡಿಸಿತ್ತು. ರಮ್ಯವಾಗಿತ್ತು.

ಆ ಬಯಲಿನ ಮಧ್ಯದಲ್ಲಿ ಒಂದು ಕಲ್ಲಿನ ಗದ್ದುಗೆಯಿತ್ತು. ಅದರ ಆಕಾರ ಚೌಕು. ಕೆಳಗೆ ಅದಕ್ಕೆ ಮೂರು ನಾಲ್ಕು ಗಗ್ರೆಗಳಿದ್ದವು. ಅವುಗಳ ಮೇಲೆ ನಯವಾದ ಸುಳಿಗಳು ಕೆತ್ತಲ್ಪಟ್ಟಿದ್ದವು. ಎಲ್ಲವನ್ನೂ ಒಂದೇ ಒಂದು ಕಲ್ಲಿನಲ್ಲಿ ಮಾಡಲಾಗಿತ್ತು. ಅದರ ಮೇಲೆ ಒಬ್ಬ ಮನುಷ್ಯನು ಕೂಡುವಷ್ಟು ಮಾತ್ರ ಜಾಗ ಇತ್ತು. ಅದಕ್ಕೆ 'ದೊಡ್ಡವರ ತೂಗುಕಲ್ಲು' (Greatmen's Balance) ಎಂದು ಹೆಸರು.

ಆ ಗದ್ದುಗೆಯ ಎಡಕ್ಕೆ ಇನ್ನೊಂದು ಎತ್ತರವಾದ ಚಪ್ಪಟೆ-ಕಲ್ಲು ನಿಂತಿತ್ತು. ಅದಕ್ಕೆ 'ಅಳೆಯುವ ಕಲ್ಲು' (Measuring Stone) ಎಂದು ಹೆಸರು. ಅದರ ಮಧ್ಯಭಾಗದಿಂದ ಮೇಲೆ ಏಳು ಭಾಗಗಳನ್ನು ಮಾಡಿದ್ದರು. ಮೊದಲನೆಯದು 'ಮುಗ್ಧತೆ' (Innocence) ಕೊನೆಯದು 'ದೇವತ್ವ' (Divinity). ಕಲೆ (Art), ಧರ್ಮ (Religion), ತತ್ವ (Philosophy) ದರ್ಶನ (Vision), ಸತ್ಯ (Truth) ಇವು ಕ್ರಮವಾಗಿ ನಡುವಿನವು.

ಅಳೆವಕಲ್ಲಿನ ಹತ್ತಿರ ಒಬ್ಬ ಮುಪ್ಪಿನ ಮುದುಕ ತನ್ನ ಭಾರವನ್ನೆಲ್ಲ ಆ ಕಲ್ಲಮೇಲೇ ಹಾಕಿ, ಎಡಗೈ ಮೇಲೆ ತನ್ನ ತಲೆಯನ್ನಿಟ್ಟುಕೊಂಡು, ಬಲಗಾಲಿಗೆ ಎಡಗಾಲು ಸುತ್ತಿಕೊಂಡು ಮುಗುಳುನಗೆ ನಗುತ್ತ ನಿಂತುಕೊಂಡಿದ್ದನು. ಆತನ ಇನ್ನೊಂದು ಕೈಯಲ್ಲಿ ಒಂದು ದಂಡವಿತ್ತು. ಜಗತ್ತಿಗೆಲ್ಲ ದೊಡ್ಡವರೆನಿಸಿಕೊಂಡವರೂ ದೊಡ್ಡವರೆನಿಸಿಕೊಳ್ಳುವವರೂ ಅಲ್ಲಿ ಆ ಹಸಿರು ಹಾಸಿಗೆಯ ಮೇಲೆ ಎಳೆಗೂಸುಗಳಾಗಿ ನಲಿಯುತ್ತ ಕೆಲೆಯುತ್ತ ಆಟವಾಡುತ್ತಿದ್ದುದನ್ನೂ ಬಳ್ಳಿಗಳ ಜೋಕಾಲಿಯಲ್ಲಿ ಕುಳಿತು ತೂಗಿ ತೂಗಿ ಹಾಡುತ್ತಿದ್ದುದನ್ನೂ ಆತನು ಲೀಲೆಯಿಂದ ನೋಡುತ್ತ, ಕೇಳುತ್ತ ನಿಂತುಕೊಂಡಿದ್ದನು. ಆ ಕೂಸುಗಳ ಆನಂದವೆಷ್ಟು! ಅವರು ಹಾಡುತ್ತಿದ್ದುದನ್ನು ಕೇಳಿದರೆ ತಲೆಯು ತಾನಾಗಿಯೆ ತೂಗುತ್ತಿತ್ತು. ಸವಿಯು ಮನಸ್ಸನ್ನು ತಣಿಸುತ್ತಿತ್ತು. ಅವರ ಹಾಡು 'ಎಲ್ಲೆಕಟ್ಟು ಇಲ್ಲದ' ಆನಂದದ ಹಾಡು. 'ತೂಗು! ತೂಗು! ಜೀವನದ ಜೀಕವನ್ನು ಅನಂತದ ವರೆಗೂ ತೂಗು, ತೂಗು.' ಇದು ಅವರ ಹಾಡಿನ ಪಲ್ಲವಿ.

ನಾನೂ, ನನ್ನೊಡನೆ ಕೆಲ ಸಂಗಾತಿಗಳು ಕೂಡಿ ಆ ಬಯಲಿಗೆ

ಹೊರಟೆವು. ಮುದುಕನು ನಮ್ಮನ್ನು ನೋಡಿ ಕಣ್ಸನ್ನೆ ಮಾಡಿ ಕರೆದ. ಹೋದೆವು. ಆತನು ಒಬ್ಬೊಬ್ಬರನ್ನಾಗಿ ನಮ್ಮನ್ನು ಆ ಆಳೆವಕಲ್ಲಿಗೆ ನಿಲ್ಲಿಸಿದ. ನಮ್ಮಲ್ಲಿ ಒಬ್ಬ 'ತತ್ವ'ದ ಗೆರೆಯ ವರೆಗೆ ಬಂದ. ಇನ್ನೊಬ್ಬ 'ಕಲೆ'ಯ ವರೆಗೆ ಬಂದ. ನಾನು 'ಮುಗ್ಧತೆ'ಯ ವರೆಗೆ ಬಂದೆ. ಮುದುಕ ನಸುನಕ್ಕು ನನಗೆ ಹೇಳಿದ: "ಮಗೂ, ಮುಗ್ಧತೆಯೆ ಮೊದಲ ಮೆಟ್ಟಲು. ಅದರ ವರೆಗೆ ಬಾರದಿದ್ದವರಿಗೆ ತೂಗುಕಲ್ಲಿನ ಮೇಲೆ ಕೂಡಲು ಅಧಿಕಾರವಿಲ್ಲ. ನಿನ್ನ ದೈವ ಒಳ್ಳೆಯದು."

ಅಲ್ಲಿಂದ ನಮ್ಮನ್ನು ಸಾಲಾಗಿ ನಿಲ್ಲಿಸಿ ಒಂದು ವಾಕ್ಯದ ಕೆಲ ಭಾಗವನ್ನು ಕೊಟ್ಟು ಉಳಿದ ಶಬ್ದಗಳನ್ನು ಹಾಕಿ ಸಮಸ್ಯಾಪೂರ್ತಿ ಮಾಡಲಿಕ್ಕೆ ಮುದುಕ ಹೇಳಿದ.

"ಇರುವುದೇ ಯಾವುದಾದರು ..........
ಪ್ರತಿಯೊಬ್ಬ ಹಾಡುವನು ನಲಿವುಸೆಲೆಯುಕ್ಕಿಸುತ."
(Is there......every one sings in joy)

ಒಬ್ಬ 'ಲೋಕದಲ್ಲೆಲ್ಲ' (World in which) ಎಂಬ ಶಬ್ದಗಳನ್ನು ಹಾಕಿ ಅದನ್ನು ಪೂರ್ತಿಮಾಡಿದನು. ಇನ್ನೊಬ್ಬ 'ವಸ್ತುವೆದಕಾಗಿ' (Thing for which) ಎಂಬ ಶಬ್ದಗಳನ್ನು ಜೋಡಿಸಿ ಪೂರ್ಣಮಾಡಿದನು. ನಾನು 'ದಿವಸವೆಂದಿನಲಿ' (Day on which) ಈ ಶಬ್ದಗಳನ್ನು ಹಾಕಿ ವಾಕ್ಯಪೂರ್ತಿ ಮಾಡಿದೆ.

ಅಲ್ಲಿಂದ ಮುದುಕ ನಮ್ಮನ್ನು ಕರೆದುಕೊಂಡು ತೂಗುಕಲ್ಲಿನ ಹತ್ತಿರ ಹೋದನು. ಒಬ್ಬನನ್ನು ಮೊದಲು ಅದರ ಮೇಲೆ ಎತ್ತಿ ಕೂಡಿಸಿದನು. ಕೂಡಲೆ ಆ ಕಲ್ಲು ಮೇಲಕ್ಕೇಳಹತ್ತಿತು. ನಾನು ಗಾಬರಿಯಿಂದ ನೋಡ ಹತ್ತಿದೆ. ಮುದುಕ ಆ ಕಲ್ಲಿನ ಕೆಳಭಾಗವನ್ನೆ ನೋಡುತ್ತ ನಿಂತಿದ್ದ. ಆ ಕೆಳ-ಭಾಗದಲ್ಲಿ ಜಗತ್ತಿನ ಆದಿಯಿಂದ ಅಂತದ ವರೆಗಿನ ಆ ಜೀವಿಯ ಜೀವನ ಸಾರವು ಬರೆದು ಬಂದಿತು. ಮುದುಕನು ಅದನ್ನು ಓದಿ ನಮ್ಮ ಕಡೆ ತಿರುಗಿ ನಕ್ಕನು. ಕಲ್ಲು ಕೆಳಗಿಳಿಯಿತು. ಅಲ್ಲಿಂದ ಇನ್ನೊಬ್ಬನನ್ನು ಕೂಡಿಸಿದನು. ಅವನದಾದ ಮೇಲೆ ನನ್ನನ್ನೂ ಕುಳ್ಳಿರಿಸಿದನು. ನಮ್ಮೆಲ್ಲರ ಜೀವನಸಾರ ವನ್ನು ಮುದುಕ ಓದಿಕೊಂಡಿದ್ದ. ಮೇಲೆ ಕುಳಿತ ನಮಗದು ಕಾಣುತ್ತಿರಲಿಲ್ಲ.

ಅಲ್ಲಿಂದ ಮುದುಕ ನಮ್ಮನ್ನು ತಬ್ಬಿಕೊಂಡು "ಮಕ್ಕಳೇ, ನಿಮಗೆ ಇದೇನು ಗೊತ್ತೇ? ಇಲ್ಲಿಯ ಕಟ್ಟಳೆಗಳನ್ನು ಬಲ್ಲಿರಾ?" ಎಂದು ಕೇಳಿದ. ನಾವೆಲ್ಲರೂ ಒಮ್ಮೆಲೆ "ಇಲ್ಲ ಇಲ್ಲ." ಎಂದೆವು. ಮುದುಕ ನಮಗೆ ತಿಳಿಸಿ ಹೇಳಿದ:

"ಮುಗ್ಧತೆಯ ವರೆಗೆ ಬರದಿದ್ದವನಿಗೆ ತೂಗುಕಲ್ಲಿನ ಮೇಲೆ ಕೂಡುವ ಅಧಿಕಾರವಿಲ್ಲ.

ತೂಗುಕಲ್ಲಿನ ಮೇಲೆ ಕೂಡದ ಹೊರತಾಗಿ ಅವನ ಜೀವನಸಾರವು ಗೊತ್ತಾಗುವುದಿಲ್ಲ.

ಮೂರು ಸಲ ತೂಗುಕಲ್ಲಿನ ಮೇಲೆ ಬಿಡದೆ ಕುಳಿತುಕೊಂಡವನಿಗೆ ಅಳೆವಕಲ್ಲಿನ ಅವಶ್ಯಕತೆಯಿಲ್ಲ.

ತೂಗುಕಲ್ಲಿನ ಮೇಲೆ ಕುಳಿತವನಿಗೆ ಆನಂದಾಮೃತವು ಸಿಕ್ಕುತ್ತದೆ. ವಾಯುಸಂಚಾರದ ಶಕ್ತಿಯು ಅವನಲ್ಲಿ ಬರುತ್ತದೆ. ಎಲೆ-ಎಲೆಗಳ ಮೇಲೂ ಗರಿ-ಗರಿಗಳ ಮೇಲೂ ಒಡಮೂಡಿದ 'ವಿಶ್ವಾನಂದ'ದ ಮರ್ಮವು ಅವನಿಗೇ ತಿಳಿಯುತ್ತದೆ." ಎಂದು ಹೇಳಹೇಳುತ್ತಿರುವಾಗಲೆ ಮುದಕನು ಬೆಳಕಿನಲ್ಲಿ ಒಂದಾದನು. ಎಲ್ಲವೂ ಮಾಯವಾಯಿತು. (೮-೯-೧೯೨೮)

ಮೊದಲಿನ ಸೃಷ್ಟಿ ಮತ್ತೆ ಬಂತು. ಆಲದಮರದ ಬಡ್ಡಿಗೆ ಕುಳಿತು ಕೊಂಡಿದ್ದೆ. ಈ ದರ್ಶನದಲ್ಲಿ ಕಂಡ ಮುದುಕನನ್ನು ನನ್ನ ಪಯಣದಲ್ಲಿಯೂ ಮೂರು ನಾಲ್ಕು ಕಡೆ ಕಂಡ ನೆನಪು ಬಂತು. ದರ್ಶನ ಮುಗಿದ ಕ್ಷಣದಿಂದ ನನ್ನ ದೇಹ ಹಿಂಡಿ ಹಿಪ್ಪೆಯಾದಂತಾಗಿತ್ತು. ವಿಚಿತ್ರ ವೇದನೆಯಾಗ ಹತ್ತಿತು. ತಾಳಲಾರದೆ ಅಲ್ಲಿಯೆ ನೆಲಕ್ಕೊರಗಿದೆ. ಮುದುಕ ಬಂದು ಕರೆದು ಕೊಂಡು ಹೋದ.

---

# ಸ್ವಪ್ನ-ವಿಜ್ಞಾನ

"The mysterious kingdom of dreams which almost fills half our lives, has not hitherto surrendered to us any of its essential secrets"

— *Maurice Maeterlink*

ಕನಸು, ಜ್ಯೋತಿಷ್ಯ, ಶಕುನ, ಮುಹೂರ್ತ, ರಮಲ, ದೈವಭಕ್ತಿ ಇತ್ಯಾದಿಗಳು ಒಂದೇ ಮೂಢಭ್ರಾಂತಿಮಾಲೆಯೊಳಗಿನ ಮಣಿಗಳೆಂದೆಣಿಸುವ ವಿದ್ಯಾವಂತರಿರುವ ಈ ಕಾಲದಲ್ಲಿ ಕನಸಿನ ದ್ರವ್ಯದಿಂದ ಚಿತ್ರಿಸಿದ ಶಬ್ದಚಿತ್ರಗಳೆಂದರೆ ಅಷ್ಟು ಗೌರವಾರ್ಹವೆನಿಸಿಕೊಳ್ಳಲಾರದು. ಆದರೆ, ಶಾಸ್ತ್ರಕ್ಕಾಗಿ ಶಾಸ್ತ್ರಾಧಾರವನ್ನು ಕೊಟ್ಟರೆ ಸಾಕು 'ಹೀಗೇನು?' ಎಂದು ಗಾಂಭೀರ್ಯದಿಂದ ತಲೆಹಾಕಿ ಏನನ್ನೂ ನಂಬುವ ಚಟವು ಈ ವಿದ್ಯಾವಂತರಿಗಿರುವದು.

ಕೆಲವರಿಗೆ ಪಾಶ್ಚಿಮಾತ್ಯ ಶಾಸ್ತ್ರಗಳ ಆಧಾರ ಬೇಕು; ಕೆಲವರಿಗೆ ಪೌರ್ವಾತ್ಯ ಶಾಸ್ತ್ರಗಳ ಆಧಾರ ಸಾಕು. ಅದರಲ್ಲಿಯೂ ಕೆಲವರಿಗೆ ಶಾಸ್ತ್ರವು ಅರ್ವಾಚೀನ ವಿದ್ದಷ್ಟು ನಂಬಿಗೆ ಹೆಚ್ಚು; ಕೆಲವರಿಗೆ ಅದು ಪ್ರಾಚೀನವಿದ್ದಂತೆ ನಂಬಿಗೆ ಸುಲಭ. ಆದರೆ ಇದೆಲ್ಲ ವಿಚಾರಜಾಡ್ಯ ಅಥವಾ ಮೂಢತೆ ಎಂದೆ ಹೇಳ ಬಹುದು. ಪೂರ್ವೋತ್ತರ ಪಕ್ಷಗಳ ಹೊಡೆತದಲ್ಲಿ, ಖಂಡನ-ಮಂಡನಗಳ ರಣರಂಗದಲ್ಲಿ, ವಾದ-ವಿವಾದಗಳ ತರ್ಕನಿಷ್ಠುರ ತತ್ತ್ವಶೋಧನೆಯಲ್ಲಿ, ಪ್ರಯೋಗ-ಪರಿಣಾಮಗಳ ಒರೆಗಲ್ಲಿನ ತಿಕ್ಕಾಟದಲ್ಲಿ ಬದುಕಿ, ಉಳಿದು, ತಲೆಯೆತ್ತಿ ತನ್ನ ವರ್ಣರೇಖೆಗಳನ್ನು ತೋರಬಲ್ಲ ತತ್ತ್ವದ ಬೋಧವು ತತ್ಕಾಲಜೀವಿಗಳಾದ ವ್ಯವಹಾರಾಂಧರಿಗೆ ಬೇಕಾಗಿಲ್ಲ. ಯೋಗ-ಪ್ರಯೋಗ ಗಳೆಂದರೆ ಅವರಿಗೆ ತಲೆಬೇಸರಿಕೆ; ಉಪಯೋಗವೇ ಅವರ ಪ್ರಾಣ. ಆದರೆ ಯೋಗಪ್ರಯೋಗಗಳಿಲ್ಲದೆ ಉಪಯೋಗವು ತಿಳಿಯದೆಂಬುದೂ ಅವರಿಗೆ ತಿಳಿ ಯದು; ಅಥವಾ ಈ ಮಾತು ತಿಳಿದರೂ ಅದನ್ನು ತಿಳಿದುಕೊಳ್ಳುವ ತಾಳ್ಮೆ ಯಿಲ್ಲ ಅವರಿಗೆ. ಆಧುನಿಕ ಶಿಕ್ಷಿತರಲ್ಲಿ ಕನಸೆಂದರೆ ಮನದ ಕಸವೆಂಬಂತೆ ಅದೊಂದು ಅರ್ಥವಿಹೀನ ಘಟನೆಯೆನ್ನುವ 'ಫ್ಯಾಶನ್ನು' ರೂಢಿಗೆ ಬಂದಿ ಫ್ರಾಡನ ಮತವನ್ನು ಕೇಳಿದವರು ಅದೊಂದು ಕಾಮದ ಇಂದ್ರಜಾಲವೆನ್ನು 'ಫ್ಯಾಶನ್ನಿ'ಗೆ ಬಂದಿದ್ದಾರೆ. ನಮ್ಮಲ್ಲಿಯ 'ಫ್ಯಾಶನ್ನು' ಅಲ್ಲಿಗೇ ನಿಂ ದ್ದರೂ ಪಾಶ್ಚಿಮಾತ್ಯರ ವಿಚಾರದ ಕಲ್ಲೋಲಮಾಲೆಯು ಅಲ್ಲಿಯೇ ನಿಂತಿಲ್ಲ. ಅಜ್ಞಾತದ ನಡುಗಡ್ಡೆಗಳನ್ನು ಹುಡುಕಿಕೊಂಡು ಅದು ತುಡುಕಿ ಮುಂದೆ ಸಾಗಿದೆ. ಕನಸಿನ ರಹಸ್ಯವು ಇನ್ನೂ ರಹಸ್ಯಮಯವಾಗಿದೆ. ಅಲ್ಲಿಯ ಸ್ವಪ್ನವಿಜ್ಞಾನಿಗಳು 'ನೇತಿ-ನೇತಿ' ಎಂದು ಸಾರುತ್ತಿದ್ದಾರೆ. ಅಲ್ಫ್ರೆಡ್ ಮೌರಿ, ಮೌರ್ಲೀ ವಾಲ್ಡ, ಮ್ಯಾಕ್ಸ ಸಾಯ್ಮನ್, ಪಿ. ಟಿಸ್ಸೆ, ಗೊಬ್ಲೊಡ್ ಮೊದಲಾದವರೂ ಸ್ವಪ್ನವಿಷಯದಲ್ಲಿ ವಿಚಾರಗಳನ್ನು ಮಾಡಿದ್ದಾರೆ. ಮಾರ್ಕ್ವಿಸ್ ಡಿ. ಹಾರ್ವೆ ಡಿ. ಸೆಂಟ ಡೆನಿಸ್ ಎಂಬವರು ಸ್ವಾಪ್ನಸ್ಮೃತಿಯನ್ನು ಬೆಳೆಸಿಕೊಳ್ಳುವ ವಿಧಾನವನ್ನು ಕುರಿತು ತಮ್ಮ ಪ್ರಯೋಗಗಳನ್ನು ಹೇಳಿ ದ್ದಾರೆ. ಜೆ. ಡಬ್ಲ್ಯು. ಡನ್ನಿಸ್ ಎಂಬವರು ಸ್ವಪ್ನಸೂಚನೆಗಳಿಂದ ಭವಿ ಷ್ಯತ್ತನ್ನು ಆಳೆದಾಡುವ ಆಟವನ್ನು ಹೇಳಿಕೊಟ್ಟಿದ್ದಾರೆ. ಸ್ವಪ್ನಗಳ ಭವಿಷ್ಯ ಸೂಚಕಶಕ್ತಿಯನ್ನು ಕುರಿತು ಎಮ್. ಅರ್ನೆಸ್ಟ ಬೊರ್ಝಾನೊ ಇವರು

ಸಾವಿರ ಪ್ರಮಾಣಗಳನ್ನು ಸಂಗ್ರಹಿಸಿ ಶಾಸ್ತ್ರೀಯವಾಗಿ ನೂರರವತ್ತು ಸ್ವಪ್ನ ಗಳ ಚರ್ಚೆಯನ್ನೂ ಮಾಡಿದ್ದಾರೆ. ಶಾಸ್ತ್ರೀಯ ವಿಚಾರವಂತರಿಗೆ, ಮರದ ಬೊಡ್ಡೆಯೊಳಗಿನ ಗೆರೆಗಳೂ, ನೆಲದ ಹೊಟ್ಟೆಯೊಳಗಿನ ಮಣ್ಣಿನ ತರಗಳೂ, ಮರಳು ಕಾಡಿನೊಳಗಿನ ಶಂಖ, ಸಿಂಪು, ಎಲವುಗಳೂ, ಅಜ್ಞಾತ ಇತಿಹಾಸ ವನ್ನು ಉಸಿರುವ ಸಾಧನಗಳಾಗುವವು. ಅವರಿಗೆ ಸೃಷ್ಟಿಯೆಲ್ಲವು ಅರ್ಥ-ಪೂರ್ಣವಾಗಿದೆ. ಮನಗಳ್ಳರಾದ ವೈಗಳ್ಳರಿಗೆ ಸೃಷ್ಟಿಯೊಳಗಿನ ಎಷ್ಟೋ ಭಾಗವು ಅಕಸ್ಮಾತ್ತಿನ ರಾಜ್ಯದೊಳಗಿನ ನಿರರ್ಥಕದ ಸಂತೆಯ ಪಸರವಾಗಿ ತೋರುವದು.

ಆದರೆ ಜೀವನದಲ್ಲಿ ಸಾರ್ಥಕತೆಯನ್ನು ಕಾಣದೆ ಒಳ್ಳೊಳ್ಳೆ ಕನಸು ಗಳನ್ನಾದರೂ ಕಂಡೇವೇ ಎಂದು ಆಶಿಸುವ ಆಸೆಬಡಕರೂ ಇದ್ದಾರೆ. ಇಂಥ ವರಿಗೆ ಒಳ್ಳೆ ಕನಸುಗಳು ಪುಕ್ಕಟ್ಟೆ ನೋಡಿದ ಸೀನೆಮಾ ನಾಟಕಗಳಂತೆ. ಅಂಕೆಗಳಿಗೆ ದೈವವನ್ನು ತೂಗುಹಾಕಿದ ಲಾಟರಿಮೂಢರು, ಗ್ರಹಗಳಿಗೆ ಜೋತುಬಿದ್ದ ದೈವಪರವಶರು, ಚಕ್ರಬಂಧ ಒಗಟುಗಳ ಚಕ್ರವ್ಯೂಹದಲ್ಲಿ ಲಕ್ಷ್ಮಿಯ ಹೆಜ್ಜೆಯನ್ನು ಹುಡುಕಾಡುವ ಅಭಿನವ ಶಬ್ದಭಕ್ತರು, ಇವರೆಲ್ಲರೂ ಕನಸಿನ ಅಂಜನದಿಂದ ಜೀವಿತದ ನಿಧಿಯನ್ನು ಕಂಡುಕೊಳ್ಳಬೇಕೆನ್ನುವ ಹುಟ್ಟು-ಮರುಳರ ಜಾತಿಯವರೇ ಸೈ. ಉಳಿದೆಲ್ಲ ವಿಚಾರದಂತೆ ಕನಸಿನ ಶಾಸ್ತ್ರೀಯ ವಿಚಾರವೂ ಭರತಖಂಡದಲ್ಲಿ ನಿಂತು ಹೋಗಿ ಬಹಳ ಕಾಲ ವಾಯಿತು. ಈಗ ಮನೆಮನೆಗಳಲ್ಲಿರುವದು ರೂಢಸಾಂಪ್ರದಾಯಿಕ ಸ್ವಪ್ನ-ಸಂಕೇತ. ನಮ್ಮ ನಮ್ಮ ಅಜ್ಜಿಯರು ಇದರ ಶಾಸ್ತ್ರವನ್ನೂ ಕಣಿಯನ್ನೂ ಹೇಳುವರು. ಹೊಟ್ಟೆ ಮೇಲಾಗಿ ಮಲಗಬಾರದು, ಎದೆಯ ಮೇಲೆ ಕೈ ಇರಬಾರದು, ತೊಲೆಯ ಕೆಳಗೆ ಮಲಗಿದರೆ ದುಃಸ್ವಪ್ನ ಬೀಳುವದು, ಹಗಲು ಮನಸ್ಸಿನಲ್ಲಿ ಬಂದದ್ದು ಹೋದದ್ದೇ ರಾತ್ರಿ ಕನಸಿನಲ್ಲಿ ವಿಕಾರವಾಗಿಯೂ ವಿಪರೀತವಾಗಿಯೂ ಬಂದರೆ ಅದು ಹಳವಂಡಗನಸು, ಅದಕ್ಕೆ ಅರ್ಥವಿಲ್ಲ; ಕನಸು ವಿರುದ್ಧಾರ್ಥಪ್ರದರ್ಶಕವಾಗಿರುವದು; ಕನಸಿನಲ್ಲಾಗಿದ್ದು ವ್ಯವಹಾರ ದಲ್ಲಾಗುವದಿಲ್ಲ—ಇವೇ ಮೊದಲಾದ ನಿಯಮಗಳನ್ನು ಅವರು ಹೇಳು ವರು. ಈ ಮಾತುಗಳಿಗೂ ಶಾಸ್ತ್ರೀಯವಾಗಿ ಅರ್ಥವಿರದೆ ಇಲ್ಲ. ನೀರೆಂದರೆ ಚಿಂತೆ, ಊಟವೆಂದರೆ ಕಷ್ಟ, ಬಂಗಾರವೆಂದರೆ ತಾಪ, ಬೆಳ್ಳಿಯೆಂದರೆ

ಶಾಂತಿ, ಮರಣವೆಂದರೆ ನಿಶ್ಚಿಂತೆ ಇತ್ಯಾದಿಯಾದ ಅದರ ಸಂಕೇತಶಾಸ್ತ್ರದಲ್ಲಿ ಕಾವ್ಯವಿದೆ; ಅರ್ಥಮಾಡುವ ಚತುರತೆಯಿದೆ. ಶುಚಿರ್ಭೂತರಾಗಿದ್ದರೆ ದುಃಸ್ವಪ್ನಗಳು ಬೀಳುವದಿಲ್ಲ, ಬಿದ್ದರೂ ದುಷ್ಟಫಲಗಳನ್ನು ಕೊಡುವದಿಲ್ಲ ಎಂಬ ಮಾತು ವಿವೇಕಿಗಳಿಗೂ ಒಪ್ಪಿಗೆಯಾಗಬಹುದು. ತಲೆಗಿಂಬಿಗೆ ಮೊಚ್ಚೆ ಕೆರವುಗಳನ್ನಿಟ್ಟರೆ ದುಃಸ್ವಪ್ನಬಂಧವಾಗುವದೆಂದೂ, ಕೆಲವು ಸ್ತೋತ್ರ ಗಳನ್ನು ಪಠಿಸಿದರೆ ದುಃಸ್ವಪ್ನನಾಶನವೂ ಅದರ ನಿವಾರಣೆಯೂ ಆಗುವದೆಂಬ ಮಾತು ಯಂತ್ರಮೋಹನಶಾಸ್ತ್ರಗಳಿಗೆ ಸೇರಿದ್ದು. ಅದು ಭಾವನೆಯ ಪ್ರಭಾವ. ಕನಸಿನ ವಿಷಯದ ಈ ತಿಳವಳಿಕೆಗಳೆಲ್ಲಾ ಹಳೆಯ ಶಾಸ್ತ್ರದ ಗಸಿಯೆಂದಾಗಲಿ, ಉಳಿಗಾಳೆಂದಾಗಲಿ ತಿಳಿಯಬಹುದು. ಆದರಲ್ಲಿ ಹೊಸ ಕಸಿರೂ ಕಸವೂ ಕೂಡಿರಬಹುದು.

ನಮ್ಮ ಶಾಸ್ತ್ರಗಳಲ್ಲಿಯೇ ಸ್ವಪ್ನಗಳ ಬಗ್ಗೆ ಏನು ಪ್ರಮೇಯಗಳು ಇವೆ ಎಂಬುದನ್ನು ತಿಳಿಯುವದಗತ್ಯ. ಕನಸಿಗೂ ನಿದ್ರೆಗೂ ಕೂಡಿಯೇ ಸ್ವಪ್ನ ಎಂಬ ಶಬ್ದವು ಸಂಸ್ಕೃತದಲ್ಲಿದ್ದುದು ಅವುಗಳ ನಿಕಟಸಂಬಂಧವನ್ನು ತೋರಿ ಸುವದು. ಕನಸಿಲ್ಲದ ನಿದ್ರೆಯಿದೆಯೆಂದೂ ನಮ್ಮ ಶಾಸ್ತ್ರಜ್ಞರು ನಂಬಿ ದ್ದಾರೆ; ಅದನ್ನು ಸುಷುಪ್ತಿಯೆಂಬ ಪ್ರತ್ಯೇಕ ಅವಸ್ಥೆಯಾಗಿ ಪರಿಗಣಿಸಿದ್ದಾರೆ. ಜಾಗೃತಿ, ಸ್ವಪ್ನ, ಸುಷುಪ್ತಿ ಇವು ಮೂರು ಚಿತ್ತದ ಅವಸ್ಥೆಗಳು. ಜಗತ್ತಿನ ಜ್ಞಾನವಿರುವದೇ ಜಾಗೃತಿ; ಜಗತ್ತಿನ ಏನೇನೂ ಜ್ಞಾನವಿಲ್ಲದಿರುವದೇ ಸುಷುಪ್ತಿ. ಜಗತ್ತಲ್ಲದಿದ್ದರೂ ಅದರಂತೆಯೇ ಒಂದು ರೂಪಸೃಷ್ಟಿಯಲ್ಲಿ ವಿಹರಿಸುವದೇ ಸ್ವಪ್ನ. ಸ್ವಪ್ನವು ಒಂದು ಚಿತ್ತದ ವೃತ್ತಿಯೆಂದೂ ಬೇಕಾದರೆ ಹೇಳಬಹುದು. ಪ್ರತಿಕ್ಷಣಕ್ಕೆ ಚಿತ್ತವು ಪ್ರತ್ಯಕ್ಷ ಜಗತ್ತಿನ ಚಿತ್ರಗಳನ್ನೊ, ಮಾನಸಿಕವಾದ ವಿಪರ್ಯಸ್ತ ಚಿತ್ರಗಳನ್ನೊ, ಇಚ್ಛಾನಿರ್ಮಿತ ವೈಕಲ್ಪಿಕ ಚಿತ್ರಗಳನ್ನೊ, ಅನುಭೂತಜ್ಞಾನಛಾಯಾರೂಪಗಳಾದ ಸ್ಮೃತಿಚಿತ್ರಗಳನ್ನೊ ನೋಡುತ್ತಲೆ ಇರುವದು. ಚಿತ್ರಗಳಿಲ್ಲದ ವಿಚಾರವೇ ಇಲ್ಲ. ವಿಚಾರವೆಂದರೆ ಮೂರ್ತತೆ, ಸಾಕಾರತೆ. ಅದಕ್ಕೆ ರೂಪವಿಲ್ಲದೆ ಇಲ್ಲ. ಬರಿ ಭಾವವಾಚಕ ಗಳಿಂದಲೇ ತುಂಬಿದ ಎಂಥ ವಿಚಾರದಲ್ಲಿಯೂ ಹೋಲಿಕೆಯಿಂದಾದರೂ ಚಿತ್ರ ವುಂಟಾಗದೆ ಹೋಗದು; ಅದರ ಸರಣಿಸಂಬಂಧಗಳಿಂದ ಒಂದು ಆಕೃತಿಯು ಕಲ್ಪನೆ ಭರುವದು. ಕನಸಿನ ರಾಜ್ಯವು ಪ್ರತ್ಯಕ್ಷದ ಸಾದೃಶ್ಯಚಿತ್ರಗಳ

ಈ ತುದಿಯಿಂದ ನಿರಾಕಾರದ ಆ ತುದಿಯವರೆಗೆ ಹಬ್ಬಿಕೊಂಡಿದೆ. ಅಂತೆಯೇ ಅಂತರ್ಲೋಕ ಬಹಿರ್ಲೋಕದ ಹೊಸ್ತಿಲದಂತೆ ಸ್ವಪ್ನಸೀಮೆಯಿದೆಯೆಂದೂ ನಿದ್ರೆಯೆಚ್ಚರಗಳ ಸಂಗಮದಲ್ಲಿ ಕನಸು ಈಸಾಡುವದೆಂದೂ ಋಷಿಗಳು ತಿಳಿದಿದ್ದರು. 'ಸ್ವಪ್ನೇ ಮಹಿಮಾನಮನುಭವತಿ' ಸ್ವಪ್ನದಲ್ಲಿ ಸೃಷ್ಟಿಯನ್ನೂ ಪ್ರತಿಸೃಷ್ಟಿಯನ್ನೂ ಮಾಡುವ ಶಕ್ತಿಯು ಚಿತ್ತಕ್ಕುಂಟಾಗುವದಾಗಿಯೂ ಅವರು ಉಲ್ಲೇಖಿಸಿದ್ದಾರೆ. 'ಸ್ವಪ್ನ' ಶಬ್ದದ ಔಪನಿಷದಿಕ ನಿರುಕ್ತವು ಸರಿಯಿರಲಿ, ಇರದಿರಲಿ, ತನ್ನ ತಾನು ಪಡೆಯುವ, ತಿಳಿಯುವ ಮಾರ್ಗಗಳಲ್ಲಿ ಕನಸೂ ಒಂದು ಎಂದು ಅವರು ಕಂಡುಹಿಡಿದಿದ್ದರು. ಇನ್ನೇನು, ಜಗತ್ತನ್ನೆ ಮಾಯೆಯೆಂದು ತಿಳಿಯುವ ವೇದಾಂತಿಗಳಿದ್ದಲ್ಲಿ ಕನಸು ಯಾವ ಗಿಡದ ತೊಪ್ಪಲು? ಆದರೂ 'ದುಃಸ್ವಪ್ನವು ಮಿಥ್ಯಾಭೂತವಾದರುಂ ವ್ಯವಹಾರದೊಳು ಸತ್ಯಫಲವಂ ಕೊಡುವದು, ಜನಾನುಭವಸಿದ್ಧಮಪ್ಪುದರಿಂ' ಎಂದು ನಿಜಗುಣ ಶಿವಯೋಗಿಗಳು ಸೂತಸಂಹಿತೆಯ ಮತವನ್ನು ಎತ್ತಿ ಹೇಳಿದ್ದಾರೆ. ಹೀಗಾಗಿ ವ್ಯವಹಾರದಲ್ಲಿ ಅರಸರಿಂದ ಆಳುಗಳ ವರೆಗೂ ಕನಸಿನ ಆಸೆ ಅಂಜಿಕೆಗಳು ಅನುಭವಸಿದ್ಧವಾಗಿ ಶುಭಾಶುಭವನ್ನೊ ರೋಗಮರಣಗಳ ಬರವನ್ನೊ ತಿಳಿದುಕೊಳ್ಳಲು ಕನಸುಗಳನ್ನು ಉಪಯೋಗಿಸುವದು ರೂಢಿಯಾಗಿತ್ತು. ಇಂಥ ನೈಮಿತ್ತಿಕ ಪ್ರಕರಣಗಳಲ್ಲಿ ಸ್ವಪ್ನಮೀಮಾಂಸೆಯು ಸಿಗದಿದ್ದರೂ ಆದೊಂದು ಗತಾನುಭವ ಸಂಗ್ರಹವಿರಬೇಕೆಂದು ತೋರುವದು. ಒಂದು ರಾತ್ರಿಯಲ್ಲಿ ಎರಡು ಕನಸು ಬಿದ್ದರೆ ಕೊನೆಗೆ ಬಿದ್ದದ್ದೆ ಫಲದಾಯಕ. ರಾತ್ರಿಯ ಪ್ರಥಮ ಯಾಮದಲ್ಲಿ ಬಿದ್ದ ಕನಸು ಒಂದು ವರ್ಷಕ್ಕೆ ಪರಿಣಾಮ ತೋರಿಸುವದು; ದ್ವಿತೀಯ ಯಾಮದ ಕನಸು ಆರು ತಿಂಗಳಲ್ಲಿ, ತೃತೀಯ ಯಾಮದ ಕನಸು ಮೂರು ತಿಂಗಳಲ್ಲಿ, ಚತುರ್ಥ ಯಾಮದ ಕನಸು ಹದಿನೈದು ದಿನಗಳಲ್ಲಿ, ತೀರ ಅರುಣೋದಯದಲ್ಲಿ ಬಿದ್ದ ಕನಸು ಹತ್ತು ದಿನಗಳಲ್ಲಿ ಫಲ ಕೊಡುವದೆಂದು ಕನಸಿಗೂ ಅದರ ಕಾಲಪರಿಪಾಕಕ್ಕೂ ಇರುವ ಸಂಬಂಧ ಹೇಳಿದ್ದಾಗಿದೆ. 'ಶೋಭನೇ ಸ್ವಪ್ನೇ ಪಶ್ಚಾತ್ ಸ್ವಾಪೋ ನ ಶಸ್ಯತೇ' ಒಳ್ಳೆ ಕನಸು ಬಿದ್ದ ಮೇಲೆ ನಿದ್ದೆಮಾಡಬಾರದು, ಕೆಟ್ಟ ಕನಸು ಬಿದ್ದರೆ ಹಿಂದಿನ ಸ್ವಪ್ನದ ಹುರುಳು ಕೆಡುವುದೆಂದೂ, ಕೆಟ್ಟ ಕನಸು ಬಿದ್ದ ಮೇಲೆ ನಿದ್ದೆಮಾಡಬೇಕು, ಇನ್ನೊಂದು ಒಳ್ಳೆ ಕನಸು ಬಿದ್ದರೆ

ಒಳ್ಳೇದು, ಎಂದು ಯುಕ್ತಿಯನ್ನೂ ತಿಳಿಸಿದೆ. ಶುಭಾಶುಭ ಸ್ವಪ್ನಗಳಲ್ಲಿ ಕೆಲವು ಯಾಕೆ ಶುಭ, ಯಾಕೆ ಅಶುಭ ಎಂಬುದು ಸ್ಪಷ್ಟವಾಗಿಯೇ ತಿಳಿಯುವದು. ಆದರೆ 'ನರ್ತನಂ ಹಸನಂ ಚೈವ ವಿವಾಹೋ ಗೀತಮೇವ ಚ' ಇವು ಅಧನ್ಯಸ್ವಪ್ನಗಳೇಕೆ ಎಂಬುದಾಗಲಿ, 'ದರ್ಶನಂ ರುಧೀರಸ್ಯಾಪಿ ಸ್ನಾನಂ ವಾ ರುಧಿರೇಣ ಚ' ಇದು ಶುಭಸ್ವಪ್ನವೇಕೆ ಎಂಬುದಾಗಲಿ ಅಷ್ಟು ಸ್ಪಷ್ಟವಲ್ಲ. ಎಷ್ಟೋ ಜನರ ಅನುಭವವು ಹಾಗೆ ಬಂದದ್ದೆ ಆ ತಿಳಿವಳಿಕೆಗೆ ಆಧಾರವಿರಬೇಕು.

ಇಂದು ಮತ್ತೆ ಹೊಸ ಸ್ವಪ್ನ-ವಿಜ್ಞಾನವು ಪ್ರಾರಂಭವಾಗಬೇಕಾಗಿದೆ. ಆದರೆ ತುಣುಕು ರೊಟ್ಟಿಗೂ ತೊಟಕು ಮಾನಕ್ಕೂ ಪಶುಗಳಂತೆ ಸಂಕಟ ಪಡಬೇಕಾದ ಈ ಕಾಲದಲ್ಲಿ ಕನಸಿನ ಆಕಾಶಕುಸುಮವನ್ನು ಕೊಯ್ಯುವರಾರು? ಮಾಲೆಕಟ್ಟುವರಾರು? ಮನಸ್ಸಿನ ಸುಪ್ತ, ಜಾಗೃತವಿರಹಿತ, ನಿಗೂಢ ಭಾವಗಳ ಬಗ್ಗೆ ಹೊಸ ಚಿಕಿತ್ಸೆ ಮೀಮಾಂಸೆಗಳು ಅನ್ನದ ಕಾಟವಿಲ್ಲದ ಪಾಶ್ಚಿಮಾತ್ಯ ದೇಶಗಳಲ್ಲಿ ಹುಟ್ಟಿವೆ. 'ಕನಸಿಲ್ಲದ ನಿದ್ರೆಯೆ ಇಲ್ಲ'ವೆಂದೊಬ್ಬರೂ, 'ನಾವು ಕನಸಿನಲ್ಲಿ ಕಂಡ ಸ್ವರ್ಗ ನರಕಗಳ ನೆನವು ಜಾಗೃತ ಬುದ್ಧಿಯು ಹೊರಲಾರದ ಭಾರ. ಅಂತೆಯೇ ಅದರ ಅನುಭವ ಬಂದೂ ಅದರ ಸ್ಮೃತಿಯು ನಿಚ್ಚಳವಾಗಿ ಉಳಿಯುವದಿಲ್ಲ'ವೆಂದಿನ್ನೊಬ್ಬರೂ, 'ಕನಸಿನ ಸ್ವರ್ಗ, ನರಕಗಳೆಲ್ಲ ಕಾಮಾಹಂಕಾರಗಳ ಕಣ್ಣು-ಮುಚ್ಚಾಟ, ಹುಡುಗಬುದ್ಧಿಯ ಸುಳ್ಳು-ಪಳ್ಳಾಟ, ಮನೋರಾಜ್ಯದ ನಾಟಕ'ವೆಂದು ಮತ್ತೊಬ್ಬರೂ ಹೇಳುವರು. ಆದರೆ ಮನುಷ್ಯನಿಗೆ ಎಷ್ಟು ಪ್ರವೃತ್ತಿಗಳಿವೆಯೊ ಅಷ್ಟು ಬಗೆಯ ಕನಸುಗಳೂ ಇರಬೇಕೆಂದು ತೋರುವದು. ಸ್ತ್ರೀ-ಪುರುಷರಲ್ಲಿ ಪರಸ್ಪರರ ಬಗ್ಗೆ ಅದಮ್ಯವಾದ ಆಕರ್ಷಣವಿರುವುದು ಸ್ವಾಭಾವಿಕವಾಗಿದೆಯಾದರೂ ಕಾಮವೊಂದೇ ಅವರ ಪುರುಷಾರ್ಥವಲ್ಲ, ಮೈಥುನವಷ್ಟೇ ಅವರ ಪ್ರವೃತ್ತಿಯಲ್ಲ. ಹಣ, ಅನ್ನ, ಆಯುಷ್ಯ, ಆರೋಗ್ಯ, ಸಂತತಿ, ಪ್ರತಿಷ್ಠೆ, ಅಸಾಧ್ಯ-ಸಾಧನಪ್ರಯತ್ನ, ಕಾರುಣ್ಯ, ಜಯ, ಶಾಂತಿ, ಚಿಂತಾವಿಸ್ಮರಣ, ಸೌಂದರ್ಯಪ್ರೀತಿ, ಆಟದ ಆನಂದಗಳೂ ಅವರನ್ನು ಪ್ರತಿಕ್ಷಣಕ್ಕೂ ಕಾಮದಷ್ಟೆ ಆಕರ್ಷಿಸುತ್ತಿರುವವು. ಇವುಗಳ ಪ್ರವಾಹ ಪ್ರತಿಬಿಂಬಗಳು ಕನಸಿನಲ್ಲಿ ಮೂಡದೆ ಹೋಗಲಾರವು. ಮಲೆನಾಡಿನ ಹಳ್ಳಿಗಳಲ್ಲಿ

ಎಲ್ಲ ಚಿಂತೆ, ಕಷ್ಟ, ರೋಗ, ಮರಣ, ಲಾಭ, ಜಯಗಳಿಗೆ ದೆವ್ವಗಳೇ ಕಾರಣ ಗಳೆಂದು ಅದರ ಆರಾಧನೆ ಸಂತರ್ಪಣಗಳೇ ನಡೆದಿರುವಂತೆ ಪಾಶ್ಚಿಮಾತ್ಯ ದೇಶೀಯರು ಕಾಮಭೂತಕ್ಕೆ ಅತಿ ಮಹತ್ವವನ್ನು ಕೊಟ್ಟಿದ್ದಾರೆ. ಮಲೆನಾಡಿ ನವರ ಸಿದ್ಧಾಂತವು ಸುಳ್ಳೂ ಇರಬಹುದು. ಆದರೆ ಅದನ್ನು ನಿಜವೆಂದೇ ತಿಳಿದು ಮಾಡಿದ ನಿದಾನ ಚಿಕಿತ್ಸೆಗಳಿಗೆ ಫಲ ಬಂದಿದೆಯಲ್ಲ? ಎಂದರೆ? ಮನಸುಗೊಟ್ಟು ಮಾಡಿದ ಎಲ್ಲ ಚಿಕಿತ್ಸೆಗೂ ಏನಾದರೂ ಫಲ ಬರಲೇಬೇಕು. ಅಥವಾ ಅವರ ಸಿದ್ಧಾಂತವು ಸತ್ಯವಿದ್ದಮಟ್ಟಿಗೆ ಫಲವೂ ಬರುತ್ತಿರಬೇಕು. ಹೀಗಾದಷ್ಟಕ್ಕೆ ಅವರ ಇಡೀ ಸಿದ್ಧಾಂತವು ಸತ್ಯವಾಗಲಾರದು, ಅಥವಾ ಅದೊಂದೇ ಸಿದ್ಧಾಂತವೆಂಬ ಮಾತೂ ಸರಿಯಾಗಲಾರದು. ಫ್ರಾಡನ ಕಾಮ ಪ್ರಮೇಯವೂ, ಆಡ್ಲರನ ಪ್ರತಿಷ್ಠಾಪ್ರಮೇಯವೂ ಅಂತರಂಗದ ನೆಲೆ ಹುಡು ಕುವ ಒಂದೊಂದು ವಿಧಾನಗಳಾಗಬಲ್ಲವಲ್ಲದೆ, ಅದೊಂದೆ ಸತ್ಯ, ಉಳಿದುದು ಮಿಥ್ಯೆಯೆಂಬ ಮಾತು ತತ್ತ್ವಜಿಜ್ಞಾಸುಗಳಿಗೆ ಮಾರ್ಗದರ್ಶಕವಾಗಲಾರದು. 'ಆಹಾರ-ನಿದ್ರಾ-ಭಯ ಮೈಥುನ'ಗಳು ತಮ್ಮ ತಮ್ಮ ಉದ್ದೀಪನ, ರತಿ, ಶಾಂತಿಗಳ ಕನಸುಗಳನ್ನು ಹುಟ್ಟಿಸುವವೆಂದೇ ಹೇಳಬೇಕು. ಎಲ್ಲ ಕನಸು ಗಳನ್ನು ಲೈಂಗಿಕ ಪರಿಭಾಷೆಯಲ್ಲಿ ಬಿಡಿಸಿ ಹೇಳುವದಾಗಲಿ, ಎಲ್ಲ ಮಾತು ಗಳಿಗೂ ಬೀಭತ್ಸ ಲೈಂಗಿಕ ಅರ್ಥವನ್ನು ಸಾಲೆಯ ತುಂಟ ಹುಡುಗರು ಕಲ್ಪಿಸುವಂತೆ ಮಾಡುವದಾಗಲಿ ಬಹಳ ಬಿಗಿಯಾದ ಕೆಲಸವಲ್ಲ. ಆದರೆ ಅದರಿಂದ ಬಹಳ ಪ್ರಯೋಜನವಿಲ್ಲ. ನಮ್ಮ ಅಜ್ಜಿಯ ಕನಸಿನಲ್ಲಿ ಒಂದು ಕರಿಯ ಬೆಕ್ಕು ಬಂದಿತ್ತು. ಅದರ ಅರ್ಥವೇನೆಂದು ಒಬ್ಬ ಕಣಿ ಹೇಳುವ ಮುದುಕಿಗೆ ಕೇಳಲಾಗಿ—ಅದು ವಿಷ್ಣು, ಅವನು ನಿಮ್ಮ ಸಂರಕ್ಷಣೆ ಮಾಡುತ್ತಿದ್ದಾನೆ—ಎಂದು ಆಕೆ ಹೇಳಿದಳು. ಇದರಿಂದ ನಮ್ಮ ಅಜ್ಜಿಗೂ ಸಮಾಧಾನವಾಗಿರಬೇಕು; ವಿಷ್ಣುದೇವರ ಸಂರಕ್ಷಕದೃಷ್ಟಿ ಯಾರಿಗೆ ಬೇಕಾ ಗಿಲ್ಲ? ಈ ಘಟನೆ ನಡೆದಾಗ ನಾನಿನ್ನೂ ಚಿಕ್ಕವನಿದ್ದು ಕನ್ನಡ ಸಾಲೆಯಲ್ಲಿ ಕಲಿಯುತ್ತಿದ್ದೆ; ಅಂದೂ ನನ್ನ ಬಾಲಮನಸ್ಸಿಗೆ ಈ ಭಾಷ್ಯಾರ್ಥವು ಸರಿಬರ ಲಿಲ್ಲವಷ್ಟೆ ಅಲ್ಲ, ನಗೆಯುಂಟುಮಾಡಿತು. ರೋಗನಿದಾನದಲ್ಲಿ ಫ್ರಾಡನ ವಿಧಾನವೂ, ಸಾಮಾಜಿಕ ಶೀಲಸಂವರ್ಧನೆಯಲ್ಲಿ ಆಡ್ಲರನ ತಂತ್ರವೂ ಕೆಲ ಮಟ್ಟಿಗೆ ಪರಿಣಾಮಕಾರಕಗಳಾಗಿರಬಹುದು. ಅಷ್ಟರಮಟ್ಟಿಗೆ ಜನರು ಅವರಿಗೆ

ಕೃತಜ್ಞರೇ ಸರಿ. ಆದರೆ ಮನಸಿನಲ್ಲಾಗಲಿ ಕನಸಿನಲ್ಲಾಗಲಿ ಇದಕ್ಕೂ ಹೆಚ್ಚು ಇನ್ನೇನೂ ಇಲ್ಲವೆಂಬ ಅವರ ಖಂಡಿತವಾದವು ಜ್ಞಾನಪ್ರಾಪ್ತಿಯೊಳಗಿನ ಎಲ್ಲ ಖಂಡಿತವಾದಗಳಂತೆ ಅವರವರ ಅಜ್ಞಾನದ ಸೀಮೆಯನ್ನು ತೋರಿಸುವದು, ಅಷ್ಟೇ. ಕನಸಿನ ಸಹಾಯದಿಂದ ಮನಸಿನ ಅಂತರಂಗವನ್ನು ಹೊರಪಡಿಸಿಕೊಳ್ಳುವದು ಸಾಧ್ಯವಿರಲಾರದೇ? ಜಾಗೃತಿಯಲ್ಲಿ ಸ್ವಪ್ನಾನುಭವವು ಕೆಲಮಟ್ಟಿಗೆ ಉಳಿದು ಬಂದೂ ಜಾಗೃತಿಗೆ ತೆರೆದು ತೋರುವ ಸೃಷ್ಟಿಯೇ ಬೇರೆ ಇರುವಂತೆ, ಸ್ವಪ್ನದಲ್ಲಿ ಜಾಗೃತಿಯ ಅನುಭವಸಂಸ್ಕಾರಗಳಿದ್ದೂ ಸ್ವಪ್ನಕ್ಕೇ ಸಹಜವಾದ ಬೇರೊಂದು ನಿಜಸೃಷ್ಟಿಯೇ ಅಲ್ಲಿ ಇರಲಾರದೇ? ಜಾಗೃತ ದೃಷ್ಟಿಗಿಂತ ಸ್ವಪ್ನದೃಷ್ಟಿಯ ಶಕ್ತಿಯೇ ಬೇರೆಯಾಗಿಲ್ಲವೇ?

ಸ್ವಪ್ನದ ಸ್ಥಲನಿಯಮ, ಪಾತ್ರನಿಯಮಗಳೇ ಬೇರೆಯಾಗಿ ತೋರುವವು. ಜಾಗೃತಿಯಲ್ಲಿ ಎಷ್ಟೋ ಹೊತ್ತು ಹಿಡಿಯುವ ಸಂಗತಿಯು ಸ್ವಪ್ನದಲ್ಲಿ ಒಂದು ಕ್ಷಣದಲ್ಲಿ ಆಗಿಹೋಗುವದು. ಸ್ವಪ್ನದಲ್ಲಿಯ ಪಾತ್ರಗಳು ನಮ್ಮ ಜಾಗೃತ ಅಥವಾ ಸ್ವಪ್ನ ಇಚ್ಛೆಯಂತೆ ನಡೆಯುವವು ನಿಜ. ಆದರೆ ಎಷ್ಟೋ ಸಲ ಅವು ತಮ್ಮ ಸ್ವತಂತ್ರ ಬುದ್ಧಿಯಿರುವಂತೆ ನಡೆಯುವದರ ಗುಟ್ಟೇನು? ಮೋಡಗಳು ತಮ್ಮ ರೂಪಗಳನ್ನು ಎಷ್ಟೇ ಬೇಗ ಬದಲಿಸಿದರೂ ಸ್ವಪ್ನದ ಸ್ಥಲಸ್ಥಿತ್ಯಂತರ ಶಕ್ತಿಯು ಅವಕ್ಕಿಲ್ಲ. ಚಲಚಿತ್ರಗಳ ಸ್ವೇಚ್ಛಾಸ್ಥಿತ್ಯಂತರ ಸ್ವಾತಂತ್ರ್ಯವು ಸ್ವಪ್ನದ ಛಾಯೆ ಮಾತ್ರ. ಪ್ರಾಣಪಟದ ಮೇಲೆ ಚಿತ್ರಕಾಶದಿಂದ ನಡೆದ ಚಲಚ್ಚಿತ್ರಪ್ರದರ್ಶನವೇ ಸ್ವಪ್ನಮಾಲೆಯೆಂದು ನಾವು ತಿಳಿದರೂ, ಅಲ್ಲಿಯ ಕಥಾನಕಗಳನ್ನು ರಚಿಸುವವರಾರು? ಪ್ರದರ್ಶಿಸುವ ಉದ್ದೇಶವೇನು? ಪ್ರದರ್ಶಕರಾರು? ಅಲ್ಲಿಯ ಕಲಾವಂತರು ಎಲ್ಲಿಯವರು? ಅದರ ಯಂತ್ರಶಾಲೆಯೆಲ್ಲಿದೆ? 'ಅಯ್ಯೋ! ಸ್ವಪ್ನದಂಥ ಹುಡುಗಾಟಕ್ಕೆ ಇಷ್ಟೆಲ್ಲ ಮೀಮಾಂಸೆಯೇ?' ಎನ್ನಬಹುದು. ಆದರೆ ಜ್ಞಾನವು ಬೆಳೆಯುವದೇ ಈ ಹಾದಿ, ಶಾಸ್ತ್ರ ಕಟ್ಟುವದೇ ಈ ರೀತಿ. ಸಾಮಾನ್ಯರಿಂದ ಶಾಸ್ತ್ರ ಹುಟ್ಟಿಲ್ಲ. ಜ್ಞಾನ ಬೆಳೆದಿಲ್ಲ. ಅವರು ಶಾಸ್ತ್ರಜ್ಞಾನಗಳ ವಿಷಯ ಹಾಗು ಉಪಭೋಕ್ತೃತಳು. ವಿಶೇಷ ಜನರ ವಿಶೇಷ ಅನುಭವದಿಂದಲೂ ಸಾಮಾನ್ಯ ಜನರ ಅನುಭವಸಾಮಾನ್ಯತೆಗೆ ಇರುವ ಅದರ ಸಾದೃಶ್ಯದಿಂದಲೂ ಶಾಸ್ತ್ರಕ್ಕೆ ಹಾದಿಯಾಗುವದು. ಸ್ವಪ್ನಗಳನ್ನು ಸಾಂಗೋಪಾಂಗವಾಗಿ

ನೆನಪಿಡುವ ಸೂಕ್ಷ್ಮಸ್ಮೃತಿ, ಸ್ವಪ್ನಪ್ರಮಾಣಗಳ ಸಂಗ್ರಹ, ಪ್ರಕೃತ ಸೃಷ್ಟಿ ಜ್ಞಾನದೊಡನೆ ಅದರ ಸಾಮಾನ್ಯ ವೈಷಮ್ಯ, ಅವುಗಳ ಸಾಮಾನ್ಯ ಹಾಗು ವಿಶೇಷಧರ್ಮಗಳ ನಿಶ್ಚಯ, ಅದರಿಂದ ಜಾಗೃತಜೀವನಕ್ಕೆ ಕೊಡಬಹುದಾದ, ಬರಬಹುದಾದ ಸಂಸ್ಕಾರ, ಅಧರಿಂದ ಸೃಷ್ಟಿಯ ಬಗ್ಗೆಯೇ ಬದಲಾಗಬಹುದಾದ ನಮ್ಮ ದೃಷ್ಟಿ ಇತ್ಯಾದಿ ವಿಷಯುಗಳನ್ನು ಕುರಿತು ಸ್ವಪ್ನವಿಜ್ಞಾನಿಗಳು ಚಿಕಿತ್ಸೆಮಾಡಬೇಕಾಗಿದೆ. ಪ್ರಪಂಚದಲ್ಲಿ ಸಾಮಾಜಿಕ ರಾಜಕೀಯ ಸಮಸ್ಯೆಗಳ ಕತ್ತಿಯು ಸತ್ತುಬಿದ್ದಿರುವಾಗ ಕನಸಿನ ನೊಣಗಳನ್ನು ನೋಡುವವರಾರು ? ಅದು ನಿಜವೇ! ಆದರೂ ಯಾರ ಹಾದಿಯಲ್ಲಿ ಯಾವುದು ಹೆಚ್ಚಾಗಿ ಬರುವದೋ ಅದರ ಚಿಕಿತ್ಸೆ ನಡೆಸದೆ ಅವರಿಗೆ ಗತಿಯಿಲ್ಲ. ಹೀಗಾಗಿಯೇ ಜ್ಞಾನವು ಕಣಕಣವಾಗಿ ರಾಶಿಗೂಡುವದು. ಜ್ಞಾನವು ತಾತ್ಕಾಲಿಕ ವ್ಯಾವಹಾರಿಕ ಉಪಯೋಗಕ್ಕಾಗಿ ಹೆಚ್ಚಾಗಿ ಬೆಳೆಯದು. ಜೀವಜೀವಗಳ ಮಾನಸಿಕ ಸಮಸ್ಯೆ, ಕುತೂಹಲ, ನಾವಿನ್ಯದಾನಂದ ಸಂಶೋಧನ ಸಾಹಸಗಳಿಂದ ಅದು ವೃದ್ಧಿಯಾಗುವದು.

ಸ್ವಪ್ನವು ಒಂದು ರೂಪಸೃಷ್ಟಿ. ಚರ್ಮಚಕ್ಷುಗೋಚರವಾದ ಪ್ರಕಾಶಕ್ಕೂ ವಸ್ತುವಸ್ತುಗಳ ರೂಪಕೃತಿಗಳನ್ನು ವಿಕಿರಿಸುವ ಶಕ್ತಿಯಿದೆ. ಯಾಂತ್ರಿಕ ಯುಕ್ತಿಯಿಂದಲೂ ರಾಸಾಯನಿಕ ಶಕ್ತಿಯಿಂದಲೂ ಆ ರೂಪಾಕೃತಿಗಳನ್ನು ಹಿಡಿದಿಡಬಹುದು. ಭಾವಚಿತ್ರಯಂತ್ರದ ಕೆಲಸವೇ ಅದು. ನಮ್ಮ ಚರ್ಮಚಕ್ಷುವೂ ಮಿದುಳೂ ಅದೇ ಬಗೆಯ ಕೆಲಸ ಮಾಡುವವು. ಆದರೆ ಭಾವಚಿತ್ರಯಂತ್ರಕಾರ್ಯದಲ್ಲಿ ಒಬ್ಬ ಸಜ್ಞ ಶಿಲ್ಪಿಯು ಕಾರ್ಯಮಾಡುತ್ತಿರುವಂತೆ, ಕಣ್ಣು ಮಿದುಳುಗಳ ಸಹಾಯದಿಂದ ಚಿತ್ರಸಂಗ್ರಹಮಾಡಿ ಸ್ಮೃತಿಮುದ್ರಣಾಲಯದಲ್ಲಿ ಅದರ ಪ್ರತಿಗಳನ್ನು ತೆಗೆದುಕೊಡುವ ಶಿಲ್ಪಿಯು ಒಳಗಾರಿರಬಹುದು ? ಸ್ಮೃತಿಚಿತ್ರಗಳ ಸಂಸ್ಕಾರದಿಂದ ಕೃತಿಚಿತ್ರಗಳನ್ನೂ ನಿರ್ಮಿಸುವ ಚಿತ್ರಕಾರನೊಬ್ಬನು ಬೇರೆಯಿರಬಹುದೇ ? ಸ್ವಪ್ನಚಿತ್ರಪಟಗಳನ್ನು ಮೂಡಿಸಿ ತೋರಿಸುವ ಬೇರೊಬ್ಬನು ಇವರ ಸಹೋದರನೇ ಆಗಿರಬಹುದೇ ? ಸ್ಮೃತಿಯು ಜಗಜ್ಜನಿತ ಚಿತ್ರಗಳಲ್ಲ, ಕೃತಿಯು ಇಚ್ಛಾಜನಿತ ಚಿತ್ರಗಳಲ್ಲ, ಸ್ವಪ್ನದ ಸ್ವೇಚ್ಛಾಜನಿತ ಚಿತ್ರಗಳಲ್ಲ, ದೃಷ್ಟಾಂತ ಧ್ಯಾನಗಳ ಪರೇಚ್ಛಾ ಪರಲೋಕ

ಜನಿತ ಚಿತ್ರಗಳನ್ನೂ ನೋಡಬಲ್ಲ ಯೋಗದೃಷ್ಟಿಯ ಯೋಗಿಯೊಬ್ಬನು ಇವರೆಲ್ಲರ ಅಗ್ರಜನಿರಲಾರನೇ ? ಅಯ್ಯೋ, ಇವೆಷ್ಟು ಪ್ರಕಾರಗಳು ? ಮನೋರಾಜ್ಯದೊಳಗಿನ ಮಾನಸಿಕ ಪ್ರಕಾರಗಳಿವು ಎಂದು ಒಟ್ಟಾರೆ ಎಂದರೆ ಕೆಟ್ಟುಹೋಗುವದಾದರೂ ಏನು ? ಸರಿ. ವನದಲ್ಲಿ ಹುಟ್ಟಿದ್ದೆಲ್ಲ ವನಸ್ಪತಿ; ತಿನ್ನಲು ಯೋಗ್ಯವಾದದ್ದೇ ರಸ, ಇಲ್ಲದ್ದು ವಿಷ, ಉಳಿದದ್ದು ಕಸ–ಎಂಬ ವಿಂಗಡವು ರೂಢಿಗೆ ಸಾಗಬಹುದು; ಜಿಜ್ಞಾಸೆಯ ಪ್ರಥಕರಣಕ್ಕೆ ಸಾಕಾಗಲಾರದು. ಕಲಾವಂತರ ಪ್ರತಿಭೆಯ ಉಗಮದ ವಿಜ್ಞಾನವಿರಲಿ, ಸಾಮಾನ್ಯ ಸ್ಮೃತಿಯ ತಂತ್ರಜ್ಞಾನವೂ ಆಗಿಲ್ಲ ಮಾನಸಶಾಸ್ತ್ರಜ್ಞರೆನಿಸಿಕೊಳ್ಳುವವರಿಗೆ. ಸ್ಮೃತಿಯ ಯುಂತ್ರದ ಕೀಲ ಕಾರ್ಯಗಳ ಅಭ್ಯಾಸವನ್ನೇ ಅವರು ಹೆಚ್ಚಾಗಿ ಮಾಡುತ್ತಿದ್ದಾರೆ. ಸ್ವಪ್ನದೃಷ್ಟಾಂತಗಳ ಉಗಮವಿರುವ ಉನ್ನತ ಶಿಖರಗಳ ಕಡೆಗೆ ಅವರ ಆಕಾಶಯಾನಗಳು ಈಗೀಗ ಹೋಗುತ್ತಿವೆ. ಫೋಟೊಗ್ರಾಫಿ, ಗ್ರಾಮೋಫೋನ, ವಾಯರಲೆಸ್, ರೇಡಿಯೋ ಬ್ರಾಡಕಾಸ್ಟಿಂಗ, ಟಾಕಿ, ಟೆಲೆವ್ಹಿಜನ್, ಮೊದಲಾದ ಯಂತ್ರರಚನೆಗಳಿಂದಲೇ ಅದ್ಭುತದ ಗಿರಿಗಹ್ವರಗಳು ತೆರೆದುತೋರುತ್ತಿರುವಾಗ ತತ್ಸದೃಶ ಮಾನಸಿಕ, ಅಂತರ್ವೈಜ್ಞಾನಿಕ ಶಕ್ತಿಗಳ ಶೋಧಬೋಧಗಳಾದರೆ, ಎಂಥ ಸಿದ್ಧಿಯಾಗಲಾರದು ? ಸ್ಮೃತಿ, ಪ್ರತಿಭೆ, ಸ್ವಪ್ನ, ದರ್ಶನ, ಸಮಾಧಿಗಳು, ಜ್ಞಾನದ ಪಂಚನೇತ್ರಗಳು. ಒಂದೊಂದಕ್ಕೆ ಕಾಣುವ ಪ್ರಪಂಚವೇ ಒಂದೊಂದು ಬಗೆಯಾಗಿದೆ. ಈ ಪ್ರಪಂಚಗಳಲ್ಲಿ, ಪರಸ್ಪರ ಸಂಬಂಧವಿದೆ; ಸಾದೃಶ್ಯವಿದೆ; ಒಂದನ್ನೊಂದು ಸಂಸ್ಕರಿಸುವ ಶಕ್ತಿಯಿದೆ, ಒಂದರಲ್ಲೊಂದು ಸಂಕರಸಂಸೃಷ್ಟಿಯಾಗುವ ಸಂಭವವಿದೆ. ಪಾಶ್ಚಿಮಾತ್ಯ ಶಾಸ್ತ್ರಜ್ಞರು ಕಲ್ಲು-ಮಣ್ಣುಗಳ ಅಭ್ಯಾಸದಲ್ಲಿ ತೋರಿಸುವ ಅವಲೋಕನದ ಸಮಗ್ರತೆ, ಪ್ರಯೋಗಪ್ರಾಮಾಣ್ಯದ ಏಕಾಗ್ರತೆ, ಅನುಮಾನಗಳನ್ನು ಕಟ್ಟುವ ಜಾಣ್ಮೆ ಜಾಗರೂಕತೆಗಳು ಮನೋವ್ಯಾಪಾರಗಳೆಂದೆಣಿಸಿಕೊಳ್ಳುವ ಈ ಸ್ವಪ್ನಾದಿಗಳ ಅಭ್ಯಾಸದಲ್ಲಿ ಬೇಕಾಗಿರಲಾರವೇ ? ಅಜ್ಜಿಯರ ಕನಸಿನ ಶಾಸ್ತ್ರದಿಂದ ಅಜ್ಞೇಯವಾದಿಗಳ ಕನಸಿನ ನಿರಸನಕ್ಕೇ ಹಾರುವ ಅಗತ್ಯವಿಲ್ಲ.

ಹಿಂದುಸ್ತಾನದಲ್ಲಿಯೂ ಅಲ್ಲಲ್ಲಿ ಸ್ವಪ್ನವಿಜ್ಞಾನವು ಸಾಗಿದೆ. ಶ್ರೀ. 'ಜಡಭರತ'ರು ತಮ್ಮ ಸ್ವಪ್ನಗಳನ್ನೆ ಆಯ್ದು ಅವನ್ನೆ ಒಂದು ಕ್ರಮದಲ್ಲಿ

ಇಲ್ಲಿ ಹೊಂದಿಸಿದ್ದಾರೆ. ಈ ಸ್ವಪ್ನಗಳನ್ನು ಕೃತಿಗಳೆಂದು ತಿಳಿದರೂ ತಪ್ಪಿಲ್ಲ. ಅವುಗಳಲ್ಲಿ ಅಷ್ಟು ತಿರುಳಿದೆ. ಒಡಗಥೆಗಳಂತಿರುವ ಅವರ ಸ್ವಪ್ನಗಳ ವಿಷಯವಿನ್ಯಾಸದಲ್ಲಿ ವೇಧಕತೆಯಿದೆ; ಆ ದೃಷ್ಟಿಯಲ್ಲಿ ಭೇದಕತೆಯಿದೆ, ಶೋಧಕತೆಯಿದೆ, ಬೋಧಕತೆಯಿದೆ. ಸಾಹಿತ್ಯಕ್ಕೆ ಹೆಚ್ಚೇನು ಬೇಕು? ಇದೊಂದು ಸಾಹಿತ್ಯಪ್ರಕಾರವನ್ನು ಮೊತ್ತದಲ್ಲಿ ತಂದು ಈಗಿನ ಕನ್ನಡ ಸವಿನುಡಿಗೆ ಇನ್ನೊಂದು ರುಚಿಯನ್ನು ಸೇರಿಸಿದ್ದಕ್ಕಾಗಿ ರಸಿಕರು ಅವರಿಗೆ ಉಪಕೃತರಾಗದೆ ಇರರು. ಕಥೆ, ಕವನಗಳಲ್ಲಿ ಸ್ವಪ್ನಾನುಭವಗಳನ್ನೂ, ಸ್ವಪ್ನೋಕ್ತಿಗಳನ್ನೂ, ಬಳಸಿಕೊಂಡವರಿದ್ದರು, ಆದರೆ ವಿಸ್ತಾರೋನ್ನತಿಗಳು ಬೇರೆಡೆಗೆ ಇಷ್ಟು ವ್ಯಕ್ತವಾಗಿ ಬಂದಿರಲಿಲ್ಲ. ಈ ಸ್ವಪ್ನಗಳ ಆದರ್ಶವಾದಿತ್ವವು ಇವುಗಳ ಒಳ್ಳೆ ಗುಣಗಳಲ್ಲೊಂದು. 'ಜಡಭರತ'ರಿಗೆ ಜಾಗೃತಿಯಲ್ಲಿರದ ಕೃತಿಸಾಮರ್ಥ್ಯವು ಸ್ವಪ್ನದಲ್ಲಿ ಲಭಿಸಿದ್ದುದು ಅವರ ಭಾಗ್ಯ. ವ್ಯವಹಾರ ಸಂಕೋಚದಿಂದ ಬಂದ ಅಲ್ಪತ್ವವು ಅಲ್ಲಿ ಮಾಯವಾಗಿ ಎಲ್ಲ ಸಾಹಿತಿಗಳಲ್ಲಿರ ಬೇಕಾದ ದಾರ್ಶನಿಕಶಕ್ತಿಯು ಅವರಿಗೆ ಮೈದುಂಬಿ ಬರುವದು. ಕಥೆ ಯಾವ ರೂಪ ಧರಿಸಿದರೇನು, ಅದಕ್ಕೆ ಜ್ಞಾನದ ಕಾಂತಿಯಿದೆ. ಇದಕ್ಕು ಹೆಚ್ಚು ಏನು ಬೇಕು?

ದ. ರಾ. ಬೇಂದ್ರೆ

---

# ಮನೋಹರ ಗ್ರಂಥಮಾಲೆ

## — ಪರಿಚಯ ಪತ್ರ —

**ಪ್ರಾರಂಭ :**

ಈ ಗ್ರಂಥಮಾಲೆಯು **೧೯೩೩ ನೆಯ ಅಗಸ್ಟ ೧೫ಕ್ಕೆ** ( ಶ್ರೀ ಅರವಿಂದರ ಜನ್ಮದಿನವನ್ನು ನೆನೆದು ) ಪ್ರಾರಂಭವಾಗಿದೆ.

**ಪ್ರಕಟಿಸುವ ಸಾಹಿತ್ಯ :**

ಕಾದಂಬರಿ, ಸಣ್ಣಕತೆ, ನಾಟಕ, ಏಕಾಂಕ, ಹರಟೆ, ದಿನಚರಿ ಮೊದಲಾದ ಸರಸಸಾಹಿತ್ಯವನ್ನೆ ಈ ಗ್ರಂಥಮಾಲೆಯು ನಿಯತಕಾಲಾವಕಾಶದಲ್ಲಿ ಪ್ರಕಟಿಸುತ್ತಿದೆ.

ಅನುವಾದ, ಭಾಷಾಂತರಗಳಿಗಿಂತಲೂ ಸ್ವತಂತ್ರಗ್ರಂಥಗಳನ್ನೆ ಹೆಚ್ಚಾಗಿ ಪ್ರಕಟಿಸುತ್ತಿದೆ.

ಕಾವ್ಯ-ವಿಮರ್ಶೆ-ವಿಜ್ಞಾನ-ವಿಚಾರ ಸಾಹಿತ್ಯವನ್ನೂ ಗ್ರಂಥಮಾಲೆಯು **ಬಿಡಿಮುತ್ತುಗಳೆಂದು** ಆಗೀಗ ಪ್ರಕಟಿಸುತ್ತಿದೆ.

**ನಮ್ಮ ಸಲಹೆಗಾರರು :**

ಶ್ರೀಯುತರಾದ ದ. ರಾ. ಬೇಂದ್ರೆ, ವಿ. ಕೃ. ಗೋಕಾಕ, ರಂ. ಶ್ರೀ. ಮುಗಳಿ ಇವರು ಈ ಗ್ರಂಥಮಾಲೆಗೆ ಪ್ರಾರಂಭದಿಂದಲೂ ಸಾಹಿತ್ಯವಿಷಯದಲ್ಲಿ ಸಲಹೆಗಾರರಾಗಿ ಮಾರ್ಗದರ್ಶನ ಮಾಡುತ್ತಿದ್ದಾರೆ.

**ನಮ್ಮ ಬರೆಹಗಾರರು :**

ಇಡಿ ಕನ್ನಡ ನಾಡಿನ ಸಿದ್ಧಹಸ್ತ ಬರೆಹಗಾರರೆಲ್ಲರೂ ಈ ಗ್ರಂಥಮಾಲೆಗಾಗಿ ಗ್ರಂಥಗಳನ್ನು ಬರೆದುಕೊಟ್ಟು ಅದರ ಗೌರವವನ್ನೂ ಕೀರ್ತಿಯನ್ನೂ ಹೆಚ್ಚಿಸಿದ್ದಾರೆ; ಅದರ ಸಾಹಿತ್ಯಸ್ಥಾನವನ್ನು **ಉನ್ನತ**ವಾಗಿಸಿದ್ದಾರೆ.

**ಹೊಸ ವರ್ಷ :**

ಗ್ರಂಥಮಾಲೆಯ ಹೊಸ ವರ್ಷವು **ಅಗಸ್ಟ** ತಿಂಗಳಿಂದ ಪ್ರಾರಂಭವಾಗುತ್ತದೆ; ಜುಲೈ ತಿಂಗಳಿಗೆ ಮುಗಿಯುತ್ತದೆ.

**ಚಂದಾದಾರರಾಗುವದು :**

ವರ್ಷದಲ್ಲಿ ಯಾವಾಗ ಬೇಕಾದರೂ ಹೊಸದಾಗಿ ಚಂದಾದಾರರಾಗಬಹುದು. ಆದರೆ ಆ ಹಿಂಪೆ ಪ್ರಕಟವಾದ ಆ ವರ್ಷದ ಗ್ರಂಥಗಳನ್ನು — ಅಗಷ್ಟದಿಂದಲೆ ಪ್ರಾರಂಭವೆಂದು ತಿಳಿದು — ಅವರಿಗೆ ಕಳಿಸಿಕೊಡಲಾಗುವುದು.

ಚಂದಾಹಣವನ್ನು ಮುಂಗಡವಾಗಿ ಕೆಳಗೆ ಕಾಣಿಸಿದ ವಿಳಾಸಕ್ಕೆ ಮನಿಯಾರ್ಡರ ಮೂಲಕ ಕಳುಹಿಸಿಕೊಡಬೇಕು.

ಚೆಕ್ಕುಗಳನ್ನು ಸ್ವಿಕರಿಸಲಾಗುವುದಿಲ್ಲ.

**ಹಿಂದಿನ ಗ್ರಂಥಗಳು :**

ಗ್ರಂಥಮಾಲೆಯ ನಡೆಯುವ ವರ್ಷದ ಗ್ರಂಥಗಳನ್ನು ಬಿಟ್ಟು ಹಿಂದಿನ ಗ್ರಂಥಗಳಿಗೆ ಚಂದಾಸವಲತ್ತಿಲ್ಲ. ಅವನ್ನು ಮುಖಬೆಲೆ ಕೊಟ್ಟು ಕೊಳ್ಳಬೇಕಾಗುವದು.

**ಆಜೀವಚಂದಾ :**

ಗ್ರಂಥಮಾಲೆಗೆ **ಒಂದೇ ಸಲಕ್ಕೆ ೧೫೦ ರೂಪಾಯಿಗಳನ್ನು** ಸಲ್ಲಿಸಿ ಆಜೀವ ಚಂದಾದಾರರಾಗಬಹುದು. ಅವರಿಗೆ ಅವರ ಆಜನ್ಮಪರ್ಯಂತಗ್ರಂಥಮಾಲೆಯಲ್ಲಿ ಪ್ರಕಟವಾಗುವ ಗ್ರಂಥಗಳನ್ನು ಹಾಗೆಯೆ ಸಲ್ಲಿಸಲಾಗುವದು.

ಗ್ರಂಥಮಾಲೆಯ **ಬಿಡಿಮುತ್ತುಗಳನ್ನು** ವಿಶೇಷ ಸವಲತ್ತಿನಿಂದ ಅವರಿಗೆ ಪೂರೈಸಲಾಗುವುದು.

**ವಾರ್ಷಿಕ ಚಂದಾ :**

ಗ್ರಂಥಮಾಲೆಯ ವಾರ್ಷಿಕ ಚಂದಾ ಅಂಚೆವೆಚ್ಚ ಸೇರಿ **ಆರು ರೂಪಾಯಿ ಎಂಟಾಣೆ ( ೬-೮-೦ )** ಮಾತ್ರ ಇದೆ.

ಗ್ರಂಥಮಾಲೆಯ ಕಾರ್ಯಾಲಯದಲ್ಲಿಯೆ ಬಂದು ತೆಗೆದುಕೊಂಡು ಹೋಗಲಪೇಕ್ಷೆಯುಳ್ಳವರಿಗೆ ಮಾತ್ರ ( ಅಂಚೆವೆಚ್ಚ ಬಿಟ್ಟು ) ಐದು ರೂಪಾಯಿ ಎಂಟಾಣೆ ( ೫-೮-೦ ) ಮಾತ್ರ ತೆಗೆದುಕೊಳ್ಳಲಾಗುವುದು.

**ವರ್ಷಕ್ಕೆ ಕೊಡುವ ಪುಟಗಳು :**

ಗ್ರಂಥಮಾಲೆಯಿಂದ ಒಂದು ವರ್ಷದಲ್ಲಿ ಚಂದಾದಾರರಿಗೆ ಕ್ರೌ. ೮. ೯೦೦ ಪುಟಗಳಷ್ಟು ಸರಸಸಾಹಿತ್ಯವನ್ನು ಸಲ್ಲಿಸಲಾಗುತ್ತದೆ.

**ಸೂಚನೆ :**

‘ ಬೇಡಿಕೆ ’ ಯನ್ನು ಕೊಡುವಾಗ ‘ **ಸಧ್ಯಕ್ಕೆ ಮಾರಾಟಕ್ಕೆ ದೊರೆಯುವ ಗ್ರಂಥಗಳ** ’ ಪಟ್ಟಿಯೊಳಗಿಂದಲೇ ಆಯ್ದು ಕಳುಹಿಸಬೇಕು.

## — ಪುಸ್ತಕ ವ್ಯಾಪಾರಿಗಳಿಗೆ ಮಾತ್ರ —

ಪುಸ್ತಕ ವ್ಯಾಪಾರಿಗಳು ತಮ್ಮ ಬೇಡಿಕೆಯನ್ನು ಕಳಿಸುವಾಗ ‘ ಸದ್ಯಕ್ಕೆ ಮಾರಾಟಕ್ಕೆ ದೊರೆಯುವ ಗ್ರಂಥಗಳ ’ ಪಟ್ಟಿಯೊಳಗಿಂದ ಮಾತ್ರ ಆಯ್ದು ಕಳಿಸಬೇಕು.

**ಬೇಡಿಕೆಯೊಡನೆ ಮುಂಗಡ ಹಣ ಕಳುಹಿಸಬೇಕು.**

ಬೇಡಿಕೆಯ ಒಟ್ಟುಬೆಲೆಯ ಮೇಲೆ ೧೮ ೩/೪% ಕಮಿಶನ್ ಕೊಡಲಾಗುವುದು.

**೧೫೦ ರೂಪಾಯಿಗಳ ಮೇಲ್ಪಟ್ಟು ಬೇಡಿಕೆ ಕಳುಹಿಸಿದಲ್ಲಿ Free Delivery ಕೊಡುವ ಸವಲತ್ತಿದೆ.**

ಪ್ಯಾಕಿಂಗ್, ಅಂಚೆವೆಚ್ಚ ಪ್ರತ್ಯೇಕ.

**ವಿಳಾಸ :**

ಸಂಪಾದಕ

**ಮನೋಹರ ಗ್ರಂಥಮಾಲಾ**

**ಧಾರವಾಡ**

---

ಮನೋಹರ ಗ್ರಂಥಮಾಲೆಯ ಶತಗ್ರಂಥಪೂರ್ತಿಯಾಗುವ



ಈ ವರುಷಕ್ಕೆ

ಚಂದಾದಾರರಿದ್ದವರಿಗೆ— ಮತ್ತು — ಚಂದಾದಾರರಾಗುವವರಿಗೆ

## ಒಂದು ಸುವರ್ಣಪ್ರಸಂಗ! ವಿಶೇಷ ಸೌಕರ್ಯ!

# ಆರು ರೂಪಾಯಿ ಎಂಟಾಣೆಯಲ್ಲಿಯೆ

## ಹದಿನೈದುನೂರು ಪುಟಗಳ ಮನೋಹರ ಸರಸಸಾಹಿತ್ಯ!

ಹೊಸದಾಗಿ ಚಂದಾದಾರರಾಗುವವರು

ಈ ಸುಪ್ರಸಂಗವನ್ನು ಕಳೆದುಕೊಳ್ಳಬಾರದು.

ಇದೇ ವರುಷದಲ್ಲಿ ಮನೋಹರ ಗ್ರಂಥಮಾಲೆಯ ಶತಗ್ರಂಥಪೂರ್ತಿ ಯಾಗುವುದನ್ನು ನೆನೆದು, ನಮ್ಮ ಬರೆಹಗಾರರು ಕೊಟ್ಟ ಉತ್ಸಾಹದ ಆಶ್ವಾಸನಗಳನ್ನು ನಂಬಿ, ನಮ್ಮ ಗ್ರಾಹಕರು ಈ ವರೆಗೂ ಸಲ್ಲಿಸುತ್ತ ಬಂದ ಪ್ರೋತ್ಸಾಹವನ್ನನುಲಕ್ಷಿಸಿ, ಕನ್ನಡಸಾಹಿತ್ಯಪ್ರಯೋಗಮಂದಿರದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಸಾಹಿತ್ಯಜ್ಞರ ಸಹಕಾರ ಪಡೆದು ಪ್ರಾರಂಭಿಸುವ ಸಾಹಸಕ್ಕೆ ಕೈಹಾಕಿದ್ದೇವೆ. ಸಾಹಿತ್ಯನಿರ್ಮಾಣದ ಈ ಪ್ರಯೋಗದಲ್ಲಿ ಹುಟ್ಟಬಹುದಾದ ಕೃತಿಗಳ ಕಲ್ಪನೆ ನಮಗೂ ಇಲ್ಲ; ಪ್ರಯೋಗ ನಡೆಯಿಸಿದ ಆ ಸಾಹಿತ್ಯಜ್ಞರಿಗೂ ಇರಲಿಕ್ಕಿಲ್ಲ. ಆದರೆ ಉತ್ತಮ ಕೃತಿನಿರ್ಮಾಣಕ್ಕೆ ಈ ಪ್ರಯೋಗ ಅನುವುಮಾಡಿಕೊಟ್ಟೀತು ಎಂಬ ಆಶೆ ನಮ್ಮನ್ನು ಈ ದಾರಿಯಲ್ಲಿ ನಡೆಯಿಸಿದೆ.

**ನಮ್ಮ ಗ್ರಾಹಕರಿಗೆ ವಿಶೇಷಸೂಚನೆ:**

ಸಾಹಿತ್ಯನಿರ್ಮಾಣದ ರೂಪರೇಷೆಯನ್ನು ಓದಿನೋಡಿ ಅದರಲ್ಲಿ ಕಾಣಿಸಿದ ಎಲ್ಲ ಗ್ರಂಥಗಳೂ ಇದೇ ವರುಷದಲ್ಲಿ ಬರುತ್ತವೆಂದಾಗಲಿ, ಅದೇ ಕ್ರಮದಲ್ಲಿ ಬರುತ್ತವೆಂದಾಗಲಿ ದಯವಿಟ್ಟು ತಿಳಿದುಕೊಳ್ಳಬಾರದು.

ಆದರೊಳಗಿಂದ ಈ ವರುಷದಲ್ಲಿ (೧೯೪೯ ರ ಅಗಸ್ಟದಿಂದ ೧೯೫೦ ಜುಲೈ ಅಂತ್ಯದೊಳಗಾಗಿ) ಒಟ್ಟು ೧೫೦೦ ಪುಟಗಳನ್ನು ನಮ್ಮ ಗ್ರಾಹಕರಿಗೆ ಸಲ್ಲಿಸುತ್ತೇವೆ.

ಈ ಸಲ ನಿಯತಾವಕಾಶದ ನಿರ್ಬಂಧವನ್ನೂ ಸ್ವಲ್ಪಮಟ್ಟಿಗೆ ಮೀರ ಬೇಕಾಗಿದ್ದರೂ ಸಲ್ಲಿಸಬೇಕಾದ ಒಟ್ಟು ಪುಟಗಳನ್ನು ಅಗಸ್ಟ ತಿಂಗಳ ಪ್ರಾರಂಭ ದೊಳಗಾಗಿ ಸಲ್ಲಿಸಿಯೇ ಸಲ್ಲಿಸುತ್ತೇವೆ.

ಈಗ ತೋರಿಸಿದ ಸಾಹಿತ್ಯನಿರ್ಮಾಣದ ಈ ರೂಪರೇಷೆಯನ್ನು—ತೆರೆಯ ಹಿಂದೆ ಒಳಗೆ ಏನು ನಡೆದಿದೆ, ಹೇಗೆ ನಡೆದಿದೆ, ಯಾರು ಯಾರು ಯಾವ ಯಾವ ಕೃತಿನಿರ್ಮಾಣ ನಡೆಯಿಸಿದ್ದಾರೆ—ಎಂಬುದನ್ನು ನಮ್ಮ ಗ್ರಾಹಕರ ಕಲ್ಪನೆಗೆ ತಂದುಕೊಡುವುದಕ್ಕಾಗಿ ಇಲ್ಲಿ ಪ್ರಕಟಿಸಲಾಗಿದೆ.

# ಗ್ರಂಥಮಾಲೆಯಲ್ಲಿ ಮುಂದೆ ಬರುವ

# ಸಾಹಿತ್ಯ ನಿರ್ಮಾಣದ ರೂಪರೇಷೆ

**ಕಾದಂಬರಿಗಳು :**

೧ **ಮಾನಸಪುತ್ರ** (ಸಾಮಾಜಿಕ ಕಾದಂಬರಿ) .... ದ. ರಾ. ಬೇಂದ್ರೆ

೨ **ಗಂಗಾಸಾನಿ** (ಸಾಮಾಜಿಕ ಕಾದಂಬರಿ) .... ' ಗಿರಿಮಾತಾ '

೩ **ಮಿದಿನಾಪುರ ಮಲ್ಲ** (ಸಾಹಸ ಜೀವನ ಚಿತ್ರ) .... ' ಗುರುರಾಜ '

೪ **ತಾಯಿ** ('ಪರ್ಲ್‌ಬಕ್ಕ'ಳ ಕಾದಂಬರಿಯ ಆಧಾರದಿಂದ) ಕೃಷ್ಣಕುಮಾರ

೫ **ಸಮರಸವೇ ಜೀವನ** (ಇಜ್ಜೋಡಿನ ಕೊನೆಯ ಭಾಗ) ವಿ. ಕೃ. ಗೋಕಾಕ

೬ **ನಟಸಾರ್ವಭೌಮ** (ಪೂರ್ತಿಮಾಡಿದ್ದು) .... ' ಕ್ಷ '

೭ **ಮೂಕಬಲಿ** (ಸಾಮಾಜಿಕ ಕಾದಂಬರಿ) .... ಜಡಭರತ.

೮ **ಸಂಪಾದಕ** (ಕಾದಂಬರಿ) .... ಜಡಭರತ.

ಅಲ್ಲದೆ

ಕನ್ನಡಸಾಹಿತ್ಯಪ್ರಯೋಗಮಂದಿರದಲ್ಲಿ

ಸಾಹಿತ್ಯಜ್ಞರ ಪ್ರಯೋಗಫಲವಾಗಿ

**' ಒಂದು ಕಾದಂಬರಿ '**

ಹೊರಕ್ಕೆ ಬರಲಿದೆ.

ಮತ್ತು

ಐತಿಹಾಸಿಕ ಒಂದು ಸ್ವತಂತ್ರ ಮಹಾ ಕಾದಂಬರಿಯೂ

ಮುದ್ರಣಕ್ಕಾಗಿ ಸಿದ್ಧವಾಗುತ್ತಲಿದೆ.

**ನಾಟಕಗಳು :**



ಅಲ್ಲದೆ

ಕಲೋಪಾಸಕ ಮಂಡಲದವರು ತಾವು ರಂಗಭೂಮಿಯ ಮೇಲೆ ಈಗಾಗಲೆ ಪ್ರಯೋಗಮಾಡಿದ, ಮಾಡಲಿರುವ (ಪ್ರಯೋಗ ವಾದ ನಂತರ) ಸುಮಾರು ಇಪ್ಪತ್ತೈದು "ಆಶುನಾಟಕಗಳನ್ನು" ಸೇರಿಸಿ ಒಂದು ಸಂಗ್ರಹ ಮಾಡಿ ನಮ್ಮ ಗ್ರಂಥಮಾಲೆಯಲ್ಲಿ ಪವಣಿಸಲು ಕೊಡಲೊಪ್ಪಿ ಸಿದ್ಧತೆ ನಡೆಯಿಸಿದ್ದಾರೆ.

ಮತ್ತು

ಲಕ್ಷ್ಮಣರಾವ ಬೇಂದ್ರೆ, ಎಚ್. ಬಿ. ಕುಲಕರ್ಣಿ, ಆರ್. ವಿ. ಕುಲಕರ್ಣಿ, ಎ. ಎನ್. ಮೂರ್ತಿರಾವ್, ಇವರೂ ಒಪ್ಪಿ ನಾಟಕ ಗಳನ್ನು ಬರೆಯುವುದರಲ್ಲಿ ತೊಡಗಿದ್ದಾರೆ.

**ಕತೆಗಳು :**

**ನಡೆದು ಬಂದ ದಾರಿ:**

ಈ ವರೆಗೆ ಕನ್ನಡಸಾಹಿತ್ಯ ನಡೆದು ಬಂದ ದಾರಿಯನ್ನು ಗುರುತಿಸಿ ತೋರಿಸುವ ಒಂದು (ಕ್ರಾ. ೮ದ) ಒಂದು ಸಾವಿರ ಪುಟದ ವಿಶೇಷ-ಸಾಹಿತ್ಯ-ಸಂಪುಟವನ್ನು ಶ್ರೀಮಾನ್. ದ. ರಾ. ಬೇಂದ್ರೆಯವರ ಮುಖ್ಯಸಂಪಾದಕತ್ವದಲ್ಲಿ ಮನೋಹರ ಗ್ರಂಥಮಾಲೆಯ ಶತ ಗ್ರಂಥಪೂರ್ತಿಯ ನೆನಪಿಗಾಗಿ ಪ್ರಕಟಿಸುವದನ್ನು ನಿಶ್ಚಯಿಸಲಾಗಿದೆ.

---

# ಸದ್ಯಕ್ಕೆ ಮಾರಾಟಕ್ಕೆ ದೊರೆಯುವ ಗ್ರಂಥಗಳು

## ಕಾದಂಬರಿಗಳು

| | | | |
|---|---|---|---|
| ೧. | ಧರ್ಮಸೆರೆ | .... ಜಡಭರತ | .... ೨—೦–೦ |
| ೨. | ಇಜ್ಜೋಡು ೧,೨,೩,೪,೫. | ವಿ. ಕೃ. ಗೋಕಾಕ | .... ೧೦-೧೨–೦ |
| ೩. | ನಿಸರ್ಗ | .... ಮಿರ್ಜಿ ಅಣ್ಣಾರಾಯ | .... ೩—೮–೦ |
| ೪. | ಅನಂತ | .... ಸತ್ಯಬೋಧ | .... ೧—೪–೦ |
| ೫. | ಭಗ್ನಮಂದಿರ | .... ಹೇಮಂತ | .... ೪—೮–೦ |
| ೬. | ವಾಲ್ಮೀಕಿ ವಿಜಯ | .... ಕೆರೂರ ವಾಸುದೇವಾಚಾರ್ಯ. | ೧—೦-೦ |
| ೭. | ರಾಷ್ಟ್ರಪುರುಷ | .... ಮಿರ್ಜಿ ಅಣ್ಣಾರಾಯ | .... ೭—೦–೦ |
| ೮. | ಅನ್ನ | .... ರಂ. ಶ್ರೀ. ಮುಗಳಿ | .... ೪— ೦–೦ |
| ೯. | ಕಾರಣಪುರುಷ | .... ರಂ. ಶ್ರೀ. ಮುಗಳಿ | .... ೧—೮-೦ |
| ೧೦. | ಔರಂಗಜೇಬ | .... ಕೆರೂರ ವಾಸುದೇವಾಚಾರ್ಯ. | ೩—೦–೦ |
| ೧೧. | ಮುನಿಯನ ಮಾದರಿ | .... ಕೆ. ಎ. ಎನ್ ರಾವ್. | .... ೨-೧೨–೦ |
| ೧೨. | ಜಡಭರತನ ಕನಸುಗಳು.. | ಜಡಭರತ | .... ೧—೮–೦ |

## ನಾಟಕಗಳು

| | | | |
|---|---|---|---|
| ೧೩. | ಜಯಶ್ರೀ | .... ಚಿ. ಸದಾಶಿವಯ್ಯ | .... ೨—೪–೦ |
| ೧೪. | ಮಿಂಚಿನ ಹುಡಿ | .... ಕೃಷ್ಣಕುಮಾರ | .... ೨—೮–೦ |
| ೧೫. | ಎತ್ತಿದ ಕೈ | .... ರಂ. ಶ್ರೀ. ಮುಗಳಿ | .... ೧–೧೪–೦ |
| ೧೬. | ಯುಗಾಂತರ | .... ವಿ. ಕೃ. ಗೋಕಾಕ | .... ೦-೧೨–೦ |
| ೧೭. | ಬಿತ್ತಿದ ಬೆಳೆ | .... ಕೋ. ಶಿ. ಕಾರಾಂತ | .... ೧—೦–೦ |
| ೧೮. | ಪರಿವರ್ತನ | .... ಲಕ್ಷ್ಮಣರಾವ ಬೇಂದ್ರೆ | .... ೦–೧೨–೦ |
| ೧೯. | ವೇಣುಮಾವ | .... ಶ್ರೀಮತಿ ಪ.ಸೀತಾದೇವಿ | .... ೦–೧೨–೦ |
| ೨೦. | ಆಶುನಾಟಕಗಳು | .... ಬೇರೆ ಬೇರೆಯುವರು | .... ೦-೧೨–೦ |
| ೨೧. | ವಿಮರ್ಶಕ ವೈದ್ಯ | .... ವಿ. ಕೃ. ಗೋಕಾಕ | .... ೦—೬–೦ |
| ೨೨. | ನಲದಮಯಂತಿ | .... ಕೆರೂರ ವಾಸುದೇವಾಚಾರ್ಯ. | ೧—೮–೦ |

## ಇತರ

## ಬೇಗನೆ ಪ್ರಕಟವಾಗಲಿರುವ
## ಎರಡನೆಯ ಆವೃತ್ತಿಗಳು

| | | | |
|---|---|---|---|
| ೧ | ಸಾಹಿತ್ಯ ಮತ್ತು ವಿಮರ್ಶೆ | | ದ. ರಾ. ಬೇಂದ್ರೆ |
| ೨ | ಉದ್ಧಾರ | (ನಾಟಕ) | ದ. ರಾ. ಬೇಂದ್ರೆ |
| ೩ | ಕುರಿಹಿಂಡು | (ವಿಡಂಬನಗಳು) | ಜಲಧರ |
| ೪ | ಹೂಬಾಣಗಳು | (ಹಾಸ್ಯ ಪ್ರಬಂಧಗಳು) | ಪ. ರಮಾನಂದ |
| ೫ | ತುಟಿಮೀರಿದುದು | (ಹರಟೆಗಳು) | ರಾ. ಶಿ. |
| ೬ | ನಿರಾಭರಣ ಸುಂದರಿ | (ಕತೆ-ಹರಟೆಗಳು) | ದ. ರಾ. ಬೇಂದ್ರೆ |
| ೭ | ನವಿಲುಗರಿ | (ಕತೆಗಳ ಸಂಗ್ರಹ) | ಬೇರೆಬೇರೆಯವರು |
| ೮ | ಕೋಲ್ಮಿಂಚು | (ಏಕಾಂಕ ಸಂಗ್ರಹ) | ಬೇರೆಬೇರೆಯವರು |
| ೯ | ಸೋಲೋ ಗೆಲುವೋ | (ಕತೆಗಳು) | ದೇವುಡು |
| ೧೦ | ಸಮುದ್ರದಾಚೆಯಿಂದ | (ದಿನಚರಿ) | ಗೋಕಾಕ |
| ೧೧ | ಜನನಾಯಕ | (ನಾಟಕ) | ಗೋಕಾಕ |
| ೧೨ | ಗಾಳಿಗೋಪುರ | (ಕಾದಂಬರಿ) | ನಾ. ಕಸ್ತೂರಿ |
| ೧೩ | ಚಕ್ರದೃಷ್ಟಿ | (ಕಾದಂಬರಿ) | ನಾ. ಕಸ್ತೂರಿ |
| ೧೪ | ಬಾಳುರಿ | (ಕಾದಂಬರಿ) | ಶ್ರೀ. ಮುಗುಳಿ |

## ಹೊಸ ಬಿಡಿಮುತ್ತುಗಳು

| | | | |
|---|---|---|---|
| ೧ | ಮಹಾಯುದ್ಧ | (ಖಂಡಕಾವ್ಯ) | ಕೆ. ಎ. ಎನ್ ರಾವ್ |
| ೨ | ಪುಷ್ಪವಿಕ್ಷೇಪ | (ಕಾವ್ಯಸಂಗ್ರಹ) | ಸುಬ್ರಹ್ಮಣ್ಯ ಅಯ್ಯರ |
| ೩ | ತೊಳೆದ ಮುತ್ತು | (ಕತೆಗಳ ಸಂಗ್ರಹ) | 'ಶ್ರೀನಿವಾಸಸುತ' |
| ೪ | ಕಾವ್ಯಲಹರಿ | (ಕವನಗಳ ಸಂಗ್ರಹ) | 'ಶ್ರೀನಿವಾಸಸುತ' |
| ೫ | ಉಪನ್ಯಾಸ ಸಂಗ್ರಹ | | ಬೇರೆಬೇರೆಯವರಿಂದ |

# ಮನೋಹರ ಗ್ರಂಥಮಾಲೆಯಲ್ಲಿ ಇದುವರೆಗೆ ಅರಳಿದ ಕುಸುಮಗಳು

**ಸೂಚನೆ :**

ಕೆಳಗಿನ ಗ್ರಂಥಗಳಲ್ಲಿ ಈಗ ಮಾರಾಟಕ್ಕೆ ದೊರೆಯುವ ಗ್ರಂಥಗಳ ಪಟ್ಟಿಯೊಂದನ್ನು ಬೇರೆಯಾಗಿಯೆ ಕೊಟ್ಟಿದೆ. ಬೇಡಿಕೆ ಕೊಡುವವರು ಅದರಿಂದ ಆಯ್ದು ಕಳಿಸಬೇಕು.

ಅವನ್ನು ಬಿಟ್ಟು ಉಳಿದ ಗ್ರಂಥಗಳ ಪತ್ರಿಗಳು ಮುಗಿದಿವೆಯೆಂದು ತಿಳಿಯಬೇಕು.

ಈ ಪಟ್ಟಿಯನ್ನು ಗ್ರಂಥಗಳು ಪ್ರಕಟವಾದ ಕ್ರಮದಲ್ಲಿಯೆ ಕೊಡಲಾಗಿದೆ.

**ಒಂದನೆಯ ವರ್ಷ**

೧ ಸುದರ್ಶನ ( ಕಾದಂಬರಿ ) .... .... ಆನಂದಕಂದ
೨ ನವಿಲುಗರಿ (ಸಣ್ಣ ಕತೆಗಳ ಸಂಕಲನ) .... ಬೇರೆಬೇರೆಯವರು
೩ ತ್ರಿಪುರದಹನ (ವಿಚಾರಾತ್ಮಕಸಂವಾದ) ದೊರೆಸ್ವಾಮಿ ಅಯ್ಯಂಗಾರ
೪ ಬಾಳುರಿ (ಕಾದಂಬರಿ) .... ... ರಂ. ಶ್ರೀ. ಮುಗಳಿ
೫ ಬ್ರಾಹ್ಮಣರ ಹುಡಿಗಿ (ಶರತ್ ಕಾದಂಬರಿ) ಆರ್. ವ್ಯಾಸರಾಯರು
೬ ವಿಶ್ವಾಮಿತ್ರನ ಸೃಷ್ಟಿ ಭಾಗ ೧ (ಕಾದಂಬರಿ) ಶ್ರೀರಂಗ

**ಎರಡನೆಯ ವರ್ಷ**

೭ ವಿಶ್ವಾಮಿತ್ರನ ಸೃಷ್ಟಿ ಭಾಗ ೨ (ಕಾದಂಬರಿ) ಶ್ರೀರಂಗ
೮ ಜೀವನ (ಸಣ್ಣ ಕತೆಗಳ ಸಂಗ್ರಹ) .... ಕೃಷ್ಣಕುಮಾರ
೯ ಕಾಳರಾತ್ರಿ ( ಆಧ್ಯಾತ್ಮಿಯ ಆತ್ಮಕಥನ ) .... ಮಧುರಚೆನ್ನ
೧೦ ಧರ್ಮಸೆರೆ (ಕಾದಂಬರಿ) .... .... ಜಡಭರತ
೧೧ ರಾಜಯೋಗಿ (ಐತಿಹಾಸಿಕ ಕಾದಂಬರಿ) .... ಆನಂದಕಂದ
೧೨ ಕೋಲ್ಮಿಂಚು (ಏಕಾಂಕ ಸಂಗ್ರಹ) ಬೇರೆಬೇರೆಯವರು

## ಮೂರನೆಯ ವರ್ಷ

೧೩ } ೧೪ } ಇಜ್ಜೋಡು (ಕಾದಂಬರಿ) .... ವಿ. ಕೃ. ಗೋಕಾಕ
೧೫ ಕುರಿಹಿಂಡು (ವ್ಯಂಗ್ಯಚಿತ್ರಗಳು) .... 'ಜಲಧರ'
೧೬ ಧೂಮಕೇತು (ಕಾದಂಬರಿ) .... ಕೆ. ಶಂಕರಭಟ್ಟ
೧೭ ಧರ್ಮಜ್ಯೋತಿ (ನಾಟಕ) ದೊರೆಸ್ವಾಮಿ ಅಯ್ಯಂಗಾರ
೧೮ ಸೇವಾಪ್ರದೀಪ (ಐತಿಹಾಸಿಕ ನಾಟಕ) .... ರಂ. ಶ್ರೀ. ಮುಗಳಿ

## ನಾಲ್ಕನೆಯ ವರ್ಷ

೧೯ ದಿಲ್ಲೀಶ್ವರನ ದಿನಚರಿ .... ನಾ. ಕಸ್ತೂರಿ
೨೦ ಪುಷ್ಪಮಾಲೆ (ಸಣ್ಣಕತೆಗಳ ಸಂಗ್ರಹ) .... 'ಶ್ರೀಸ್ವಾಮಿ'
೨೧ ಸೋಲೋ ಗೆಲುವೋ (ಸಣ್ಣಕತೆಗಳು) .... ದೇವುಡು
೨೨ ಹಳ್ಳಿಯ ಸಮಾಜ (ಶರತ್ ಕಾದಂಬರಿ) .... ಆರ್. ವ್ಯಾಸರಾಯರು
೨೩ ಪಾವನಪಾವಕ (ಏಕಾಂಕಗಳು) .... ರಂ. ಶ್ರೀ. ಮುಗಳಿ
೨೪ ಸಮುದ್ರದಾಚೆಯಿಂದ ಭಾಗ ೧ (ಪತ್ರಗಳ ಸಂಗ್ರಹ) ಗೋಕಾಕ

## ಐದನೆಯ ವರ್ಷ

೨೫ ಸರಸಮ್ಮನ ಸಮಾಧಿ (ಕಾದಂಬರಿ) .... ಕೋ. ಶಿ. ಕಾರಂತ
೨೬ ಎರಡುಧ್ರುವ ಭಾ. ೧(ಖಾಂಡೇಕರ ಕಾದಂಬರಿ) ವಿ. ಎಂ. ಇನಾಂದಾರ
೨೭ ಎರಡುಧ್ರುವ ಭಾ. ೨( ,, ,, ) ವಿ. ಎಂ. ಇನಾಂದಾರ
೨೮ ಸಮುದ್ರದಾಚೆಯಿಂದ ಭಾಗ ೨ (ಪತ್ರಗಳ ಸಂಗ್ರಹ) ಗೋಕಾಕ
೨೯ ಹೂಬಾಣಗಳು (ಹಾಸ್ಯಕತೆಗಳು) .... ಪ. ರಮಾನಂದ
೩೦ ಮಹಾಪೂರ (ಕಾದಂಬರಿ) .... ಎಸ್. ಜಿ. ಕುಲಕರ್ಣಿ

## ಆರನೆಯ ವರ್ಷ

೩೧ ಸಂಧ್ಯಾರಾಗ (ಕಾದಂಬರಿ) .... ಅ. ನ. ಕೃಷ್ಣರಾಯ
೩೨ ಪ್ರೇಮಾಹುತಿ (ಟಾಲ್‌ಸ್ಟಾಯರ ಕಾದಂಬರಿ) ಗು. ಭೀ. ಜೋಶಿ
೩೩ ಪ್ರೇಮಾಹುತಿ ( ,, ,, ) ಗು. ಭೀ. ಜೋಶಿ
೩೪ ಜನನಾಯಕ (ನಾಟಕ) .... ವಿ. ಕೃ. ಗೋಕಾಕ

೩೫ ಸುಳುವು ಹೊಳವು (ಪ್ರಬಂಧಗಳು) .... ಬೇರೆಬೇರೆಯವರು
೩೬ ಕಾರಣಪುರುಷ (ಕಾದಂಬರಿ) .... ರಂ. ಶ್ರೀ. ಮುಗಳಿ

## ಏಳನೆಯ ವರ್ಷ

೩೭ ಹತ್ತು ವರ್ಷ (ಆತ್ಮಕತೆ) .... ಜಿ. ಪಿ. ರಾಜರತ್ನಂ
೩೮ ತುಟಿಮೀರಿದುದು (ಹಾಸ್ಯಕತೆಗಳು) .... ರಾ. ಶಿ.
೩೯ ಭಾರತಮಾರ್ಗ ಭಾಗ ೧ (ಫಾಸ್ಟರನ ಕಾದಂಬರಿ) ಗು. ಭೀ. ಜೋಶಿ
೪೦ ಭಾರತಮಾರ್ಗ ಭಾಗ ೨ ( ,, ,, ) ಗು. ಭೀ. ಜೋಶಿ
೪೧ ಗ್ರಾಮಪಂಚಾನನ (ಕಾದಂಬರಿ) .... ಬಾ. ಕೃ. ಲಕ್ಷ್ಮೇಶ್ವರ
೪೨ ಮಾರ್ಗದರ್ಶಕ (ಸಣ್ಣ ಕತೆಗಳು) .... ಎಂ. ವಿ. ಸೀತಾರಾಮಯ್ಯ

## ಎಂಟನೆಯ ವರ್ಷ

೪೩ ಗಾಳಿಗೋಪುರ (ಕಾದಂಬರಿ) .... ನಾ. ಕಸ್ತೂರಿ
೪೪, ೪೫ } ಮಂಗಳಸೂತ್ರ (ಕಾದಂಬರಿ) .... ಅ. ನ. ಕೃಷ್ಣರಾಯ
೪೬ ಬಿಡುಗಡೆಯ ಬೆಲೆ (ರಾಷ್ಟ್ರಸೇವಕನ ಆತ್ಮವೃತ್ತ) ಅಶ್ವತ್ಥನಾರಾಯಣ
೪೭, ೪೮ } ವೈಯಾರಿ (ಕತೆಗಳು) .... ಗೊರೂರ ರಾಮಸ್ವಾಮಿ

## ಒಂಬತ್ತನೆಯ ವರ್ಷ

೪೯ ಮರಳಿಮಣ್ಣಿಗೆ ಭಾಗ ೧ (ಕಾದಂಬರಿ) ... ಕಾರಂತ
೫೦ ಮರಳಿಮಣ್ಣಿಗೆ ಭಾಗ ೨ ( ,, ) .... ,,
೫೧ ಮರಳಿಮಣ್ಣಿಗೆ ಭಾಗ ೩ ( ,, ) .... ,,
೫೨ ಮರಳಿಮಣ್ಣಿಗೆ ಭಾಗ ೪ ( ,, ) .... ,,
೫೩ ಭರಮಪ್ಪನ ಭೂತ (ಪತ್ತೆದಾರಿ ಕಾದಂಬರಿ).... ಶ್ರೀರಂಗ
೫೪ ಜಯಶ್ರೀ (ನಾಟಕ) .... .... ಚಿ. ಸದಾಶಿವಯ್ಯ

## ಹತ್ತನೆಯ ವರ್ಷ

೫೫ ಪಚ್ಚೇ ಉಂಗುರ ( ಪತ್ತೆದಾರಿ ಕಾದಂಬರಿ ) ಎಂ. ಜಿ. ವೆಂಕಟೇಶಯ್ಯ
೫೬ ಮೇಡಂಕ್ಯೂರಿ ( ವಿಜ್ಞಾನಿಯ ಚರಿತ್ರೆ ) ಶ್ರೀಮತಿ ಕೆ. ವಿ. ರತ್ನಮ್ಮ

೫೭ ನೋಡಗಳು (ಸಣ್ಣ ಕತೆಗಳು) .... 'ಶ್ರೀಸ್ವಾಮಿ'
೫೮ ತೆನ್ನಾಲಿ ರಾಮಕೃಷ್ಣ (ನಾಟಕ) .... ಸಿ. ಕೆ. ವೆಂಕಟರಾಮಯ್ಯ
೫೯
೬೦ } ಬೆಟ್ಟದ ಜೀವ (ಕಾದಂಬರಿ) .... ಕೋ. ಶಿ. ಕಾರಂತ

## ಹನ್ನೊಂದನೆಯ ವರ್ಷ

೬೧ ಹೂವಿನ ಹಾಸಿಗೆ (ಮಕ್ಕಳ ಕತೆಗಳು) ... ಹೊಯಿಸಳ
೬೨ ಕನಸಿನ ಕೆಳದಿ (ಸಣ್ಣ ಕತೆಗಳು) .... ರಂ. ಶ್ರೀ. ಮುಗಳಿ
೬೩ ಕೆನ್ಸಿಂಗ್‌ಟನ್ ಪಾರ್ಕ (ಕತೆ-ಹರಟೆ-ನಾಟಕ) ಕೆ. ಗೋಪಾಲಕೃಷ್ಣ
೬೪ ಚಕ್ರದೃಷ್ಟಿ (ಕಾದಬರಿ) .... ನಾ. ಕಸ್ತೂರಿ
೬೫
೬೬ } ಮಿಂಚಿನ ಹುಡಿ (ನಾಟಕಗಳು) .... ಕೃಷ್ಣಕುಮಾರ

## ಹನ್ನೆರಡನೆಯ ವರ್ಷ

೬೭ ನಕ್ಕಳಾತಾಯಿ (ಸಾಹಿತ್ಯ ವಿಮರ್ಶಾತ್ಮಕ ಕತೆ) ಜಿ. ಪಿ. ರಾಜರತ್ನಂ
೬೮ ಮಲಮಗಳು (ಕಾದಂಬರಿ) .... ರಾ. ವೆಂ. ಶ್ರೀನಿವಾಸ
೬೯ ನಟಸಾರ್ವಭೌಮ ಭಾಗ ೧ (ಕಾದಂಬರಿ) ಅ. ನ. ಕೃಷ್ಣರಾಯ
೭೦ ಇಜ್ಜೋಡು (ಭಾಗ ೨) ವಿ. ಕೃ. ಗೋಕಾಕ
೭೧
೭೨ } ನಿಸರ್ಗ (ಕಾದಂಬರಿ) ... ಮಿರ್ಜಿ ಅಣ್ಣಾರಾಯ

## ಹದಿಮೂರನೆಯ ವರ್ಷ

೭೩ ಅನಂತ (ಕಾದಂಬರಿ) .... ಸತ್ಯಬೋಧ
೭೪
೭೫ } ನಟಸಾರ್ವಭೌಮ (ಕಾದಂಬರಿ) .... ಅ. ನ. ಕೃಷ್ಣರಾಯ
೭೬
೭೭ } ಪ್ರೀತಿಯ ಯೋಗಮಾಯೆ (ಇಜ್ಜೋಡು) ವಿ. ಕೃ. ಗೋಕಾಕ
೭೮ ಎತ್ತಿದ ಕೈ (ಏಕಾಂಕ ಸಂಗ್ರಹ) .... ರಂ. ಶ್ರೀ. ಮುಗಳಿ

## ಹದಿನಾಲ್ಕನೆಯ ವರ್ಷ

| | | | |
|---|---|---|---|
| ೭೯, ೮೦ | ಭಗ್ನಮಂದಿರ ( ಕಾದಂಬರಿ ) | .... | 'ಹೇಮಂ |
| ೮೧, ೮೨ | ದೇವತಾಮನುಷ್ಯ (ಕಾದಂಬರಿ) | .... | ಕೆ. ಶಂಕರಭಟ್ಟ |
| ೮೩ | ಯುಗಾಂತರ (ನಾಟಕ) | .... | ವಿ. ಕೃ. ಗೋಕಾಕ |
| ೮೪ | ಏರಿಳಿತ (ಇಜ್ಜೋಡು) | .... | ವಿ. ಕೃ. ಗೋಕಾಕ |
| | ಬಿತ್ತಿದ ಬೆಳೆ (ನಾಟಕ) | .... | ಕೋ. ಶಿ. ಕಾರಂತ |

## ಹದಿನೈದನೆಯ ವರ್ಷ

| | | | |
|---|---|---|---|
| ೮೫, ೮೬, ೮೭, ೮೮, ೮೯ | ರಾಷ್ಟ್ರಪುರುಷ (ಕಾದಂಬರಿ) | .... | ಮಿರ್ಜಿ ಅಣ್ಣಾರಾಯ |
| ೯೦ | ಸಮುದ್ರಯಾನ (ಇಜ್ಜೋಡು) | .... | ವಿ. ಕೃ. ಗೋಕಾಕ |

## ಹದಿನಾರನೆಯ ವರ್ಷ

| | | | |
|---|---|---|---|
| ೯೧, ೯೨ | ಅನ್ನ (ಕಾದಂಬರಿ) | .... | ರಂ. ಶ್ರೀ ಮ |
| ೯೩ | ಪರಿವರ್ತನ (ನಾಟಕ) | .... | ಲಕ್ಷ್ಮಣರಾವ ಬೇಂ |
| ೯೪ | ವೇಣುಮಾವ (ನಾಟಕ) | .... | ಶ್ರೀಮತಿ ಪ. ಸೀತಾದೇವಿ |
| ೯೫ | ಬಹುಮಾನ ಪಡೆದ ಬರೆಹಗಳು | .... | ಬೇರೆಬೇರೆಯವರು |
| ೯೬ | ಮುನಿಯನ ಮಾದರಿ (ಕಾದಂಬರಿ) | .... | ಕೆ. ಎ. ಎನ್. ರಾವ್ |

## ಹದಿನೇಳನೆಯ ವರ್ಷ

| | | | |
|---|---|---|---|
| ೯೭ | ಜಡಭರತನ ಕನಸುಗಳು | .... | ಜಡಭರ |
| ೯೮ | | | |
| ೯೯ | | | |
| ೧೦೦ | | | |

